# ಆಶೌಚ ನಿರ್ಣಯ

ವೇ|| ತಿಮ್ಮಣ್ಣ ರಾಮಕೃಷ್ಣ ಭಟ್ಟ, ಬಾಲೀಗದ್ದೆ



ಶ್ರೀ ಭಗವತ್ಪಾದ ಪ್ರಕಾಶನ
ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ
ಮಠದೇವಳ, ಶಿರಸಿ - ೫೮೧ ೩೩೬



ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ, ಪದವಾಕ್ಯಪ್ರಮಾಣ ಪಾರಾವಾರಪಾರೀಣ ಯಮನಿಯಮಾಸನ ಪ್ರಾಣಾಯಾಮಪ್ರತ್ಯಾಹಾರಧ್ಯಾನಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ಷಣ್ಮತವ್ಯವಸ್ಥಾಪನಾಚಾರ್ಯ, ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ ಶ್ರೀ ಶ್ರೀಮಜ್ಜಗದ್ಗುರು ಶಂಕರಾಚಾರ್ಯಶಿಷ್ಯ ಶ್ರೀ ಭಾಸ್ಕರೇಂದ್ರ ಸರಸ್ವತೀ ಕರಕಮಲಸಂಜಾತ ಶ್ರೀ ಶ್ರೀಮತ್ ವಿಶ್ವವಂದ್ಯ ಸರಸ್ವತೀ ಗುರುಪರಂಪರಾಪ್ರಾಪ್ತ ಸಕಲನಿಗಮಾಗಮಸಾರಹೃದಯ ಸಾಂಖ್ಯತ್ರಯಪ್ರತಿಪಾದಕ ಕ್ರಮಾಗತಶ್ರೌತಸ್ಮಾರ್ತಕರ್ಮಮಾರ್ಗವ್ಯವಸ್ಥಾಪಕ, ಅಶೇಷತ್ರಯಂತಾದ್ಯದ್ವೈತಸಿದ್ಧಾಂತಪ್ರಬಂಧ ಪ್ರವರ್ತಕ ಆದಿರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಶ್ರೀಮತ್ ಸುಧಾಪುರವರ ಸಿಂಹಾಸನಾಧೀಶ್ವರ ಸರ್ವತಂತ್ರಸ್ವತಂತ್ರ ವ್ಯಾಖ್ಯಾನ ಸಿಂಹಾಸನಾಧಿಷ್ಠಿತ, ರಾಜಾಧಿರಾಜದೇಶಿಕ ಗೋಕರ್ಣಮಂಡಲಾಧೀಶ, ಸಹ್ಯಾದ್ರಿಪುರವರಾಧೀಶ್ವರ, ಶಾಲ್ಮಲೀತೀರವಾಸ, ಶ್ರೀಮಲ್ಲಕ್ಷ್ಮೀನೃಸಿಂಹ ಚಂದ್ರಮೌಳಿಪದಪಂಕೇರುಹರಸಗ್ರಾಸಾಳಿವನ್ಮಾನಸ ಶ್ರೀ ಲಲಿತಾಚರಣದಾಸ ಶ್ರೀಮತ್ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನಾಧೀಶ್ವರ ಶ್ರೀ ಶ್ರೀಮದ್‌ಸರ್ವಜ್ಞೇಂದ್ರ ಸರಸ್ವತೀ ಶ್ರೀಸ್ವಾಮಿ ಕರಕಮಲಸಂಜಾತ ಶ್ರೀ ಶ್ರೀಮದ್‌ಗಂಗಾಧರೇಂದ್ರ ಸರಸ್ವತೀ ಶ್ರೀ ಸ್ವಾಮಿಭಿಃ

## ಶ್ರೀಮಜ್ಜಗದ್ಗುರು ಶಂಕರಾಚಾರ್ಯ
## ಶ್ರೀ ಶ್ರೀಮದ್‌ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳವರ
## ಆಶೀರ್ವಚನ



ಶ್ರೀ ಭಗವತ್ಪಾದ ಪ್ರಕಾಶನವು 'ಅಶೌಚನಿರ್ಣಯಃ' ಎಂಬ ಕೃತಿಯನ್ನು ಪ್ರಕಟಿಸಿ ಲೋಕಾರ್ಪಣಗೊಳಿಸುತ್ತಿರುವದು ಸಂತೋಷದ ವಿಷಯ.

ಧರ್ಮವೆಂಬುದು ಅತ್ಯಂತ ಗಹನವಾದದ್ದು. ಅಲ್ಲದೇ ಅವಶ್ಯವಾಗಿ ತಿಳಿದುಕೊಳ್ಳಬೇಕಾದದ್ದೂ, ತಿಳಿದು ಆಚರಿಸಲ್ಪಡಬೇಕಾದದ್ದೂ ಆಗಿದೆ. ಧರ್ಮಾಚರಣೆಗೆ ಅನೇಕ ರೀತಿಯ ಕಠಿಣ ನಿಯಮಗಳಿವೆ. ಅಭ್ಯುದಯವನ್ನು

ಸಾಧಿಸಿಕೊಳ್ಳಬೇಕೆಂದಿರುವವನು ಅವುಗಳನ್ನು ವ್ಯವಸ್ಥಿತವಾಗಿ ತಿಳಿದು ಆಚರಿದಾಗಲೇ ಅದು ಫಲಪ್ರದವಾಗುತ್ತದೆ. ಈ ಹಿನ್ನೆಲೆಯಲ್ಲಿ ಅಶೌಚದ ಆಚರಣೆಗೂ ಧರ್ಮಶಾಸ್ತ್ರವು ಹೆಚ್ಚಿನ ಮಹತ್ತ್ವವನ್ನು ನೀಡಿರುವುದು ಕಂಡುಬರುತ್ತದೆ. ಯಾವ ಕಾಲದಲ್ಲಿ ಯಾವ ವ್ಯಕ್ತಿಯು ಹೇಗೆ ಅಶುಚಿಯಾಗುತ್ತಾನೆ, ಅಶೌಚದಲ್ಲಿ ಯಾವುದು ಕರ್ತವ್ಯ, ಯಾವುದು ಅಕರ್ತವ್ಯ, ಅಶೌಚದ ಪರಿಮಾಣ ಎಷ್ಟು, ಅಶೌಚವನ್ನು ಕಳೆದು ಶುಚಿಯಾಗುವುದಕ್ಕೆ ಇರುವ ಅನುಷ್ಠಾನಗಳೇನು, ಇತ್ಯಾದಿ ಅನೇಕ ವಿಷಯಗಳನ್ನು ಪ್ರಾಚೀನ ಋಷಿ-ಮುನಿಗಳು ಧರ್ಮಶಾಸ್ತ್ರ-ಸ್ಮೃತಿಗ್ರಂಥಗಳ ಮೂಲಕ ಪ್ರಪಂಚಕ್ಕೆ ತಿಳಿಸಿಕೊಟ್ಟಿದ್ದಾರೆ. ಆದರೆ ಸಾಮಾನ್ಯ ಜನರಿಂದ ಅವುಗಳ ತಾತ್ಪರ್ಯವನ್ನು ತಿಳಿದುಕೊಳ್ಳುವುದು ಮತ್ತು ಮೇಲ್ನೋಟಕ್ಕೆ ಕಂಡುಬರುವ ವಿರೋಧಗಳನ್ನು ಪರಿಹರಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಪ್ರಾಜ್ಞರ ಮಾರ್ಗದರ್ಶನ ಹಾಗೂ ಅನೇಕ ಗ್ರಂಥಗಳ ಸೂಕ್ಷ್ಮ ಪರಿಶೀಲನೆಯಿಂದ ಮಾತ್ರವೇ ಆಯಾ ವಿಷಯಗಳನ್ನು ಸ್ಪಷ್ಟವಾಗಿ ಅರ್ಥೈಸಿಕೊಳ್ಳಲು ಸಾಧ್ಯ.

ಹಿರಿಯ ವಿದ್ವಾಂಸರೂ, ವೈದಿಕರೂ, ಧರ್ಮಶಾಸ್ತ್ರದಲ್ಲಿ ವಿಶೇಷ ತಿಳಿವಳಿಕೆಯನ್ನು ಹೊಂದಿದವರೂ ಆದ ವೇ॥ಮೂ॥ ತಿಮ್ಮಣ್ಣ ಭಟ್ಟ, ಬಾಲೀಗದ್ದೆ ಇವರು ಅನೇಕ ಧರ್ಮಶಾಸ್ತ್ರಗ್ರಂಥಗಳ ಅವಲೋಕನದಿಂದ, ಇಲ್ಲಿಯ ದೇಶಾಚಾರಕ್ಕೆ ಅನುಗುಣವಾಗುವಂತೆ 'ಅಶೌಚ ನಿರ್ಣಯ' ಎಂಬ ಈ ಕೃತಿಯನ್ನು ರಚಿಸಿ, ಆಸ್ತಿಕ ಜನತೆಗೆ ಮಹದುಪಕಾರವನ್ನು ಸಲ್ಲಿಸಿದ್ದಾರೆ. ಅಶೌಚ ಆಚರಣೆಯ ವಿಷಯದಲ್ಲಿ ಸಾಮಾನ್ಯವಾಗಿ ತಲೆದೋರುವ ಸಂದೇಹಗಳಿಗೆ ಈ ಕೃತಿಯಲ್ಲಿ ಸ್ಪಷ್ಟವಾದ ಹಾಗೂ ಸರಳವಾದ ಉತ್ತರವು ಸಿಗುವಂತಿದೆ. ಈ ಕೃತಿಯು ಎಲ್ಲ ಧರ್ಮನಿಷ್ಠರ ಕೈ ಸೇರುವಂತಾಗಲೆಂದು ಹಾರೈಸುತ್ತೇವೆ.

ಸುದೀರ್ಘ ಪರಿಶ್ರಮದಿಂದ 'ಅಶೌಚ ನಿರ್ಣಯ' ಎಂಬ ಕೃತಿಯನ್ನು ರಚಿಸಿ, ಸಮರ್ಪಿಸಿದ ಶ್ರೀ ತಿಮ್ಮಣ್ಣ ಭಟ್ಟ ಬಾಲೀಗದ್ದೆ ಇವರಿಗೂ, ಕೃತಿಯನ್ನು ಪ್ರಕಟಿಸುತ್ತಿರುವ ಶ್ರೀ ಭಗವತ್ಪಾದ ಪ್ರಕಾಶನ ಸಂಸ್ಥೆಯ ಎಲ್ಲ ಪದಾಧಿಕಾರಿಗಳಿಗೂ, ಸಮಸ್ತ ಆಸ್ತಿಕ ಜನತೆಗೂ ಆರಾಧ್ಯ ಶ್ರೀ ದೇವರು ಆಯುಷ್ಯ-ಆರೋಗ್ಯ-ಭಾಗ್ಯಗಳನ್ನಿತ್ತು ಅನುಗ್ರಹಿಸಲೆಂದು ಆಶೀರ್ವದಿಸುತ್ತೇವೆ.

ಲೋಕಾಃ ಸಮಸ್ತಾಃ ಸುಖಿನೋ ಭವಂತು

ಶ್ರೀಃ

**ನಮಾಮಿ ಯಾಮಿನೀನಾಥಲೇಖಾಲಂಕೃತಕುಂತಲಾಂ ।**
**ಭವಾನೀಂ ಭವಸಂತಾಪನಿರ್ವಾಪಣಸುಧಾನದೀಮ್ ॥**

ನನ್ನ ಚಿರಂಜೀವೀ ಬ್ರಶ್ರೀವೇ। ತಿಮ್ಮಣ್ಣ ರಾಮಕೃಷ್ಣ ಭಟ್ಟ ಬಾಲೀಗದ್ದೆ ಈತನ 'ಆಶೌಚ ನಿರ್ಣಯ' ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲಿಸಿದ್ದೇನೆ. ಅದರಲ್ಲಿ ಆಶೌಚಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನು ಚೆನ್ನಾಗಿ ಪರಿಶೀಲಿಸಿ ಸಂಸ್ಕೃತ ಭಾಷಾಽನಭಿಜ್ಞರಿಗೂ, ಅಂದರೆ ಕೇವಲ ಕನ್ನಡ ಭಾಷಾಽಭಿಜ್ಞರಿಗೂ ತಿಳಿಯುವಂತೆ ಅಂದವಾಗಿಯೂ, ಚಂದವಾಗಿಯೂ ಬರೆದಿದ್ದಾನೆ.

ಆಶೌಚ ಗ್ರಂಥಗಳಲ್ಲಿ ವಿಭಿನ್ನ ಋಷಿಗಳ ಮತವು ಪರಸ್ಪರ ವಿರುದ್ಧವಾಗಿಯೂ, ಆಯಾ ದೇಶ ಕಾಲಕ್ಕೆ ಅನುಗುಣವಾಗಿಯೂ, ಕೆಲವು ಕಾಲಕ್ಕೆ ಅನನುಗುಣವಾಗಿಯೂ ಇರುತ್ತಿದ್ದು, ಅದನ್ನೆಲ್ಲವನ್ನೂ ಚೆನ್ನಾಗಿ ಅವಲೋಕಿಸಿ ಈಗಿನ ನಮ್ಮ ಕಾಲಕ್ಕೆ ಮತ್ತು ನಮ್ಮ ದಾಕ್ಷಿಣಾತ್ಯ ಪದ್ಧತಿಗೆ ಹೊಂದುವಂತೆ ಚೆನ್ನಾಗಿ ವಿಮರ್ಶಿಸಿ ಬರೆದಿದ್ದಾನೆ. ಲೌಕಿಕರು ಮತ್ತು ವೈದಿಕರಿಗೆ ಇದು ಸುಲಭವಾಗಿ ತಿಳಿಯುವಂತಿದೆ.

ಈ ಗ್ರಂಥವನ್ನು ಆಸ್ತಿಕ ಮಹಾಜನರೆಲ್ಲರೂ ಕೊಂಡುಕೊಂಡು ಸದುಪಯೋಗ ಮಾಡಿಕೊಳ್ಳುವುದರ ಮೂಲಕ ಈತನ ಶ್ರಮವನ್ನು ಸಾರ್ಥಕಗೊಳಿಸಬೇಕೆಂತಲೂ, ಆ ಮೂಲಕ ಈವರೆಗಿನ ತಪ್ಪು ಕಲ್ಪನೆಗಳನ್ನು ದೂರಪಡಿಸಿಕೊಂಡು ಈಶ್ವರಾನುಗ್ರಹಕ್ಕೆ ಪಾತ್ರರಾಗುವರೆಂದು ಆಗ್ರಹಪೂರ್ವಕವಾಗಿ ಆಶಿಸುತ್ತೇನೆ.

ಈತನ ಕೈಯಿಂದ ಇನ್ನೂ ಹೆಚ್ಚು ಹೆಚ್ಚು ಆರ್ಷ ಗ್ರಂಥಗಳು ಹೊರಬಂದು ಜನೋಪಯೋಗಿಯಾಗಲೆಂದು, ಈತನಿಗೆ ಇನ್ನೂ ಹೆಚ್ಚು ಆಯುಷ್ಯ ಆರೋಗ್ಯ ಭಾಗ್ಯವನ್ನು ನೀಡಿ ರಕ್ಷಿಸಲೆಂದು ಶ್ರೀ ರಾಜರಾಜೇಶ್ವರಿಯನ್ನೂ, ಶ್ರೀ ನರಸಿಂಹ ದೇವರನ್ನೂ, ಶ್ರೀ ಜಗದ್ಗುರು ಪೀಠಾಧಿಪತಿಗಳನ್ನೂ ಪ್ರಾರ್ಥಿಸಿ, ತುಂಬು ಹೃದಯದಿಂದ ಆಶೀರ್ವದಿಸುತ್ತೇನೆ ಮತ್ತು ಈ ಗ್ರಂಥವು ಜನಪ್ರಿಯವಾಗಲೆಂದು ಆಶಿಸಿ ಹರಸುತ್ತೇನೆ.

ಕವಲಕ್ಕಿ, ತಾ: ಹೊನ್ನಾವರ

**ಬ್ರಹ್ಮಶ್ರೀ ರಾಮಚಂದ್ರ ಶಾಸ್ತ್ರಿಗಳು ಸೂರಿ**
ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಪಂಡಿತ
ಕರ್ಮಕಾಂಡ ವಿಚಕ್ಷಣ, ಪಂಡಿತ ಪ್ರಕಾಂಡ,
ನ್ಯಾಯವೇದಾಂತವಿದ್ವಾನ್

# ಮೊದಲ ಮಾತು

ಮನುಷ್ಯರು ವರ್ಣಾಶ್ರಮೋಕ್ತ ಪ್ರಕಾರ ಧರ್ಮ-ಕರ್ಮಗಳನ್ನಾಚರಿಸಿ ತನ್ಮೂಲಕ ಚಿತ್ತಶುದ್ಧಿಯನ್ನು ಪಡೆದು ಬ್ರಹ್ಮಜ್ಞಾನ ಹೊಂದಿ ಮೋಕ್ಷವನ್ನು ಪಡದುಕೊಳ್ಳಬೇಕೆಂಬುದಾಗಿ ಶ್ರುತಿ-ಸ್ಮೃತಿಗಳು ಆಜ್ಞಾಪಿಸಿವೆ. ಧರ್ಮ-ಕರ್ಮಾಚರಣೆಗಳಿಗೆ ಅಂತಃಶುದ್ಧಿ, ಬಹಿಃಶುದ್ಧಿ ಎರಡೂ ಅತ್ಯವಶ್ಯಕಗಳಾಗಿವೆ. **'ಶುಚಿನಾ ಕರ್ಮ ಕರ್ತವ್ಯಮ್' 'ಕಾಲೇ ಕುರ್ಯಾತ್, ಶುಚಿಃ ಕುರ್ಯಾತ್'** ಎಂದಿರುವುದರಿಂದ ಜನನ ಮರಣಾದಿ ಆಶೌಚಗಳಲ್ಲಿ ನಾವು ನಡೆಸಬೇಕಾದ ಎಲ್ಲ ಧರ್ಮ ಕರ್ಮ (ಹವ್ಯ-ಕವ್ಯ) ಗಳನ್ನು ಬಿಡಬೇಕೆಂಬುದು ಎಲ್ಲರಿಗೂ ಗೊತ್ತು. ಇಂತಹ ಜನನ ಮರಣಾದಿ ಆಶೌಚಗಳು ಸಾಕ್ಷಾತ್ ಅಥವಾ ಸರಪಳಿಯಂತೆ ಏಕಶರೀರಾವಯವಾನ್ವಯ ಸಂಬಂಧದಿಂದಲೂ (ಮನೋವ್ಯಾಮೋಹವೃತ್ತಿಯ ಕಾರಣದಿಂದಲೂ), ವ್ಯವಹಾರಸಂಪರ್ಕಾತಿಶಯದಿಂದಲೂ ಒಬ್ಬರಿಂದೊಬ್ಬರಿಗೆ ಹರಿದು ಬಂದಿರುತ್ತದೆ. ಸಂಬಂಧ ತಲೆಗಳೆಯು ದೂರ ಸರಿದಂತೆ ಆಶೌಚವು ಕಡಿಮೆಯಾಗುವುದು. ಇಪ್ಪತ್ತೊಂದು ತಲೆಗಳೆದ ನಂತರ (ಗೋತ್ರಕ್ಕೆ ಸೇರಿದ ನಂತರ) ಸ್ನಾನ ಮಾತ್ರ ಆಶೌಚವಿರುತ್ತದೆ.

ಈ ರೀತಿ ಆಶೌಚ ಬಳಕೆಯ ವಿಚಾರವಾಗಿ 'ಇದು ಹೀಗೆ?' ಎಂದು ಹೇಳುವ ಕನ್ನಡ ಭಾಷೆಯ ಸಂಗ್ರಹ ಗ್ರಂಥಗಳು ವಿರಳ. ಸಾಮಾನ್ಯ ಜನರಿಗೆ ಸಂಸ್ಕೃತ ಭಾಷೆಯ ಮೂಲಗ್ರಂಥಗಳನ್ನು ನೋಡಿ ನಿರ್ಣಯಿಸುವುದೂ ಸಹ ಕಾಲ ಮಹಿಮೆಯಿಂದ ಕಠಿಣವಾಗಿದೆ. ಅಲ್ಲಲ್ಲಿ ಅಸ್ತವ್ಯಸ್ತ ಆಚರಣೆಯೂ ಸಹ ಕಂಡುಬರುತ್ತಿದೆ. ಅದಕ್ಕಾಗಿ ನಮ್ಮ ದಾಕ್ಷಿಣಾತ್ಯ ಪದ್ಧತಿಗೆ ಸರಿಯಾಗಿರುವ ಶ್ರೀ ಕ್ಷೇತ್ರ ಗೋಕರ್ಣದ ಪ್ರಸಿದ್ಧ ಧರ್ಮಶಾಸ್ತ್ರ ವಿದ್ವಾಂಸರಾದ ಶ್ರೀ ವೆಂಕಟರಮಣ (ಅಣ್ಣ) ಪಂಡಿತರಿಂದ ಪ್ರಕಾಶಪಡಿಸಿದ 'ತಾತ್ಪರ್ಯಬೋಧಿನೀ' ಎಂಬ ವ್ಯಾಖ್ಯಾನಸಹಿತವಾದ ಆಶೌಚ ( ಅಘ) ಸಿದ್ಧಾಂತವೆಂಬ ಸಂಗ್ರಹ ಗ್ರಂಥವನ್ನೂ ಮತ್ತು ಉಡುಪಿಯಲ್ಲಿ ಪಾವಂಜೆ ಗುರುರಾವ್ ಮುದ್ರಣದಲ್ಲಿ ಪ್ರಕಟವಾದ ದೇವನಾಗರೀ ಲಿಪಿಯ (ಆಶೌಚ) ಶತಶ್ಲೋಕೀ ಮತ್ತು ಅದರ ವ್ಯಾಖ್ಯಾನವಾದ ಸ್ಮೃತಿಸಾರಸರ್ವಸ್ವ ಎಂಬ ಗ್ರಂಥವನ್ನೂ ಮತ್ತು ಅಘವಿವೇಚನೆ ಎಂಬ ಗ್ರಂಥವನ್ನೂ ಸಹ ಪ್ರಧಾನವಾಗಿ ಇಟ್ಟುಕೊಂಡು ಧರ್ಮಸಿಂಧು, ನಿರ್ಣಯ ಸಿಂಧು, ಪುರುಷಾರ್ಥಚಿಂತಾಮಣಿ, ಸ್ಮೃತಿಸಾರಸಮುಚ್ಚಯ, ಸ್ಮೃತ್ಯರ್ಥಸಾರ, ವೈದ್ಯನಾಥೀಯ ಮೊದಲಾದ ಸಂಗ್ರಹ ಮಹಾನಿಬಂಧಗಳನ್ನೂ ಮತ್ತು ಮನು, ಯಾಜ್ಞವಲ್ಕ್ಯ ಪಾರಾಶರ್ಯಾದಿ ಅನೇಕ ಸ್ಮೃತಿಗಳನ್ನೂ ಸಹ ಅವಲೋಕಿಸಿ ಈ ಆಶೌಚನಿರ್ಣಯವೆಂಬ ಪುಸ್ತಕವನ್ನು ಕನ್ನಡದಲ್ಲಿ ಬರೆದು ಸರಿಯಾದ

ಆಧಾರವಚನಗಳನ್ನೂ ಸಹ ಒದಗಿಸಲಾಗಿದೆ. ಆಧಾರವಚನಗಳ ಮೂಲ, ಆಕರ ಗ್ರಂಥಗಳ ಅಧ್ಯಾಯ, ಪುಟ, ಶ್ಲೋಕದ ಸಂಖ್ಯೆ, ಪಂಕ್ತಿಗಳ ಸಂಖ್ಯೆ ಇವುಗಳನ್ನೂ ಯುವ ವಿದ್ವಾಂಸರ ಕೆಲಸದೊತ್ತಡದಿಂದಲೂ, ಕಾಲಾಭಾವದಿಂದಲೂ ಸದ್ಯ ಒದಗಿಸಲು ಸಾಧ್ಯವಾಗಿಲ್ಲ. ಮುಂದಿನ ಆವೃತ್ತಿಯಲ್ಲಿ ಈ ಕೊರತೆಯನ್ನು ಪರಿಹರಿಸಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ ಎಂದು ವಿದ್ವಾಂಸರಲ್ಲಿ ನಮ್ರವಾದ ವಿನಂತಿ.

ಧರ್ಮಾಭಿಮಾನಿಗಳಾದ ಮಹಾಜನರು ಇದರಲ್ಲಿ ಸೂಚಿಸಿದಂತೆ ಆಚರಿಸಿದರೆ ನನ್ನ ಶ್ರಮವು ಸಫಲವಾಗುವುದು. ಮುಂದೆ ಬರೆದಿರುವ ನಿರ್ಣಯಗಳೊಳಗೆ ಏನಾದರೂ ಲೋಪದೋಷಗಳು (ಅಪಾರ್ಥ, ವ್ಯರ್ಥ, ವಿಪರೀತಾರ್ಥಗಳು) ಕಂಡುಬಂದಲ್ಲಿ ಸೂಕ್ಷ್ಮೇಕ್ಷಣ, ವಿಚಕ್ಷಣ ವಿದ್ವಾಂಸರು ಅದನ್ನು ಸೂಚಿಸಿ ನನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ.

ಈ ಆಶೌಚನಿರ್ಣಯ ಗ್ರಂಥವನ್ನು ಶ್ರೀಮಜ್ಜಗದ್ಗುರು ಶ್ರೀ ಶಂಕರಾಚಾರ್ಯ ಶ್ರೀಮದ್ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳವರ ಶ್ರೀ ಚರಣಗಳಲ್ಲಿ ಸಮರ್ಪಿಸುತ್ತೇನೆ. ಶ್ರೀಗಳವರ ಅನುಗ್ರಹ ಪಡೆದು ಸ್ವರ್ಣವಲ್ಲೀ ಸಂಸ್ಥಾನದ ಭಗವತ್ಪಾದ ಪ್ರಕಾಶನದವರು ಈ ಗ್ರಂಥವನ್ನು ಪ್ರಕಟಿಸುವ ಕಾರ್ಯಭಾರವನ್ನು ನಿರ್ವಹಿಸಿರುವುದು ನನ್ನ ಭಾಗ್ಯವೆಂದು ಭಾವಿಸುತ್ತೇನೆ. ಶ್ರೀ ಶ್ರೀಮದ್ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳು ಬಿಡುವಿಲ್ಲದ ಕಾರ್ಯಕ್ರಮಗಳಲ್ಲಿ ತೊಡಗಿಕೊಂಡಿದ್ದರೂ ಸಹ ಆಶೀರ್ವಚನವನ್ನು ನೀಡಿ ನನ್ನನ್ನು ಪಾವನಗೊಳಿಸಿದ್ದಾರೆ. ಅವರ ಪಾದಕಮಲಗಳಿಗೆ ಅನಂತ ಪ್ರಣಾಮಗಳನ್ನು ಅರ್ಪಿಸುತ್ತೇನೆ. ನನ್ನ ಶ್ರೀವಿದ್ಯಾಗುರುಗಳು ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತ ವಿದ್ವಾನ್ ಬ್ರಹ್ಮಶ್ರೀ ಪಂ. ರಾಮಚಂದ್ರ ಶಾಸ್ತ್ರಿಗಳು ಸೂರಿಯವರು ತಮ್ಮ ಜೀವಿತ ಕಾಲದಲ್ಲಿಯೇ ನಾನು ಸಂಗ್ರಹಿಸಿದ ಆಶೌಚ ನಿರ್ಣಯ ಗ್ರಂಥವನ್ನು ಅವಲೋಕಿಸಿ ಮಾರ್ಗದರ್ಶನ ನೀಡಿ ಆಶೀರ್ವಾದ ಶುಭಸಂದೇಶವನ್ನು ಅನುಗ್ರಹಿಸಿರುವರು. ಅವರು ನೀಡಿದ ಶುಭಸಂದೇಶದಲ್ಲಿ ಅವರ ಹಸ್ತಾಕ್ಷರವು (ಸಹಿ) ಇದೆ. ಅದನ್ನು ಭಗವತ್ಪಾದ ಪ್ರಕಾಶನದವರಿಗೂ ತೋರಿಸಿ ಈ ಗ್ರಂಥದಲ್ಲಿ ಸೇರಿಸಲಾಗಿದೆ. ಅವರು ಶ್ರೀ ವಿದ್ಯಾದಾನವನ್ನು ಮಾಡಿ ನನ್ನನ್ನು ಪಾವನಗೊಳಿಸಿದ್ದಾರೆ. ಅವರ ಋಣವನ್ನು ಯಾವ ಜನ್ಮದಲ್ಲಿಯೂ ತೀರಿಸಲಾರೆ. ಅವರಿಗೆ ಅನೇಕ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ.

ನಾನು ಗ್ರಂಥವನ್ನು ಬರೆಯುವಾಗ ಧರ್ಮಶಾಸ್ತ್ರದ ಮಾರ್ಗದರ್ಶನ ನೀಡಿ ನನ್ನನ್ನು ಹರಸಿದ ವೇ|ಬ್ರ| ಶ್ರೀ ವಿಘ್ನೇಶ್ವರ ದೀಕ್ಷಿತರು, ಗೋಕರ್ಣ ಇವರನ್ನು ಭಕ್ತಿ ಶ್ರದ್ಧೆಯಿಂದ ಸ್ಮರಿಸಿ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ. ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಆಸ್ಥಾನ ವಿದ್ವಾಂಸರಾದ ವಿದ್ವಾನ್ ಶ್ರೀ ಭಾಲಚಂದ್ರ ಶಾಸ್ತ್ರಿಗಳು ನನಗೆ ಅನೇಕ ವಿಧವಾದ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸಿರುವರು.

ಅವರಿಗೆ ನನ್ನ ಅನಂತ ನಮಸ್ಕಾರಗಳು. ನನ್ನ ಸಾಹಿತ್ಯಗುರುಗಳಾದ ವಿದ್ವಾನ್ ಸದಾಶಿವ ಶಾಸ್ತ್ರಿಗಳು, ಕುಮಟಾ ಕಲ್ಲಬ್ಬೆ ಇವರನ್ನು ಶ್ರದ್ಧೆಯಿಂದ ನಮಸ್ಕರಿಸುತ್ತೇನೆ. ನನ್ನ ಪ್ರಿಯ ಮಿತ್ರರಾದ ಡಾ. ಸೂರ್ಯನಾರಾಯಣ ಭಟ್ಟ, ಹಿತ್ಲಳ್ಳಿ ಮತ್ತು ವಿದ್ವಾನ್ ಗಣಪತಿ ಭಟ್ಟ, ಕಿಬ್ಬಳ್ಳಿ ಇವರು ನನಗೆ ಉತ್ತೇಜನ ನೀಡಿ ಸಹಕರಿಸಿರುವರು. ಇವರಿಬ್ಬರಿಗೂ ಅನಂತ ವಂದನೆಗಳು. ಮತ್ತು ಮಿತ್ರರಾದ ನಾಗೇಂದ್ರ ವೆಂ. ಭಟ್ ಭರಣಿ, ನಾಗೇಂದ್ರ ಭಟ್ ಹಿತ್ಲಳ್ಳಿ ಇವರಿಬ್ಬರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ.

ನಮ್ಮ ಬಾಲೀಗದ್ದೆ ಕುಟುಂಬದ ಯುವ ವಿದ್ವಾಂಸರು ಡಾ. ಶಂಕರ ಭಟ್, ಬಾಲೀಗದ್ದೆ, ವೇದಾಂತ ಪ್ರಾಧ್ಯಾಪಕರು, ಸ್ವರ್ಣವಲ್ಲೀ ಮಠ, ಡಾ. ಶ್ರೀಧರ ಭಟ್, ಬಾಲೀಗದ್ದೆ. ಎಸ್ ಡಿ ಎಮ್ ಕಾಲೇಜು ಉಜಿರೆ, (ಜ್ಯೋತಿಷ), ಡಾ. ಸೂರ್ಯನಾರಾಯಣ ಭಟ್, ಬಾಲೀಗದ್ದೆ, ರಾಜೀವ ಗಾಂಧಿ ಪರಿಸರ, ಶೃಂಗೇರಿ (ಪೂರ್ವಮೀಮಾಂಸಾ ಶಾಸ್ತ್ರ), ಡಾ. ಗೋಪಾಲ ಭಟ್ಟ, ಬಾಲೀಗದ್ದೆ, ಉಮ್ಮಚಗಿ, (ಅಲಂಕಾರ ಪ್ರಾಧ್ಯಾಪಕರು), ವಿದ್ವಾನ್ ರಾಮಕೃಷ್ಣ ಭಟ್ಟ, ಬಾಲೀಗದ್ದೆ, ಧಾರವಾಡ (ನ್ಯಾಯ ಶಾಸ್ತ್ರ), ಬ್ರಹ್ಮಶ್ರೀ ದತ್ತಾತ್ರೇಯ ಭಟ್ಟ, ಬಾಲೀಗದ್ದೆ ಮೈಸೂರು, (ಕೃಷ್ಣ ಯಜುರ್ವೇದ ಕ್ರಮಾಂತ) ಇವರೆಲ್ಲರೂ ತುಂಬಾ ಸಹಾಯ ಸಹಕಾರಗಳನ್ನು ನೀಡಿರುವರು. ಇವರುಗಳಲ್ಲಿ ಶ್ರೀ ಶಂಕರ ಭಟ್, ಬಾಲೀಗದ್ದೆ ಮತ್ತು ಶ್ರೀ ಶ್ರೀಧರ ಭಟ್, ಬಾಲೀಗದ್ದೆ (ಉಜಿರೆ) ಇವರು ವಿಶೇಷ ಆಸಕ್ತಿವಹಿಸಿ ತುಂಬಾ ಸಹಾಯ ಸಹಕಾರಗಳನ್ನು ನೀಡಿರುವರು. ನಮ್ಮ ಕುಟುಂಬದ ಎಲ್ಲ ಯುವ ವಿದ್ವಾಂಸರಿಗೆ ಆರಾಧ್ಯ ದೇವರು ಆರೋಗ್ಯವನ್ನೂ, ವಿದ್ಯಾಪ್ರೌಢಿಮೆಯನ್ನೂ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಶ್ರೀ ರಾಜರಾಜೇಶ್ವರೀ ವಿದ್ಯಾಸಂಸ್ಥೆಯ ಎಲ್ಲ ಪ್ರಾಧ್ಯಾಪಕರುಗಳನ್ನೂ ಮತ್ತು ಸಹಾಧ್ಯಾಪಕರುಗಳನ್ನೂ ವಂದಿಸುತ್ತೇನೆ. ಶ್ರೀ ಮಠದ ಪುರೋಹಿತವರ್ಗದವರನ್ನೂ, ಎಲ್ಲ ಗುರುಸೇವಾಸಕ್ತರನ್ನೂ ಈ ಸಂದರ್ಭದಲ್ಲಿ ನಮಸ್ಕರಿಸುತ್ತೇನೆ. ಈ ಪುಸ್ತಕವು ತ್ವರಿತಗತಿಯಲ್ಲಿ ಪ್ರಕಟವಾಗಲು ಸಹಕಾರಿಗಳಾದ ಶ್ರೀ ಜಿ. ಆರ್. ಭಟ್ಟ ಬಿದ್ರೆಪಾಲ್ ಇವರಿಗೆ ಶುಭಕಾಮನೆಗಳು. ಶ್ರೀ ಭಗವತ್ಪಾದ ಪ್ರಕಾಶನದ ಉಪಾಧ್ಯಕ್ಷರನ್ನೂ ಮತ್ತು ಎಲ್ಲ ಪದಾಧಿಕಾರಿಗಳನ್ನೂ ಸ್ಮರಿಸುತ್ತೇನೆ. ಡಾ॥ ಮಹಾಬಲೇಶ್ವರ ಭಟ್ಟ, ಕಿರುಕುಂಭತ್ತಿ, ವಿದ್ವಾನ್ ಮಹಾಬಲೇಶ್ವರ ಭಟ್ಟ, ಶೇಡಿಗದ್ದೆ ಇವರಿಬ್ಬರಿಗೂ ದೇವರು ಆಯುರಾರೋಗ್ಯ ಭಾಗ್ಯವನ್ನು ನೀಡಲೆಂದು ಪ್ರಾರ್ಥಿಸುತ್ತೇನೆ. ನನಗೆ ಪ್ರತ್ಯಕ್ಷ–ಅಪ್ರತ್ಯಕ್ಷವಾಗಿ ಸಹಾಯ ಸಹಕಾರಗಳನ್ನು ನೀಡಿದ ಮಹನೀಯರುಗಳನ್ನು ಮನಸಾ ನಮಸ್ಕರಿಸುತ್ತೇನೆ.

ಇತಿ ವಿಬುಧವಿಧೇಯಃ

# ವಿಷಯಾನುಕ್ರಮಣಿಕೆ

# ಆಶೌಚನಿರ್ಣಯಃ

ಪ್ರೀಣಾತು ಲಲಿತಾದೇವೀ ಶ್ರೀರಸ್ತು ಸುಖದಾಯಿನೀ ।
ಜ್ಞಾನಪೂರಂ ಸಂಭರಂತೀ ಭಾರತೀ ಸರ್ವದಾಽವತು ॥

ಶ್ರೀ ಗುರುಗಣೇಶಸರಸ್ವತೀಭ್ಯೋ ನಮಃ ॥

ನಿರ್ವಿಘ್ನಮಸ್ತು ।

ವಾಗೀಶ್ವರೀಂ ಗಣಾಧ್ಯಕ್ಷಂ ಲಕ್ಷ್ಮೀಂ ಚ ನೃಹರಿಂ ವಿಭುಮ್ ।
ಗುರೂಣಾಂ ಪಾದಯುಗಲಂ ವಿದುಷಾಂ ಚ ನಮಾಮ್ಯಹಮ್ ॥

ಆಶೌಚನಿರ್ಣಯೋ ನಾಮ ಗ್ರಂಥೋಽಯಂ ಕ್ರಿಯತೇ ಮಯಾ ।
ಜನಾನಾಂ ಉಪಕಾರಾರ್ಥಂ ಸತಿ ಶಾಸ್ತ್ರೇ ಸುಪಂಡಿತೇ ॥

ಲೌಕಿಕೇತರಭಾಷಾಯಾಂ ನಿರ್ಣಯಾಃ ಸಮುದೀರಿತಾಃ ।
ತದ್ಭಾಷಾಜ್ಞಾನಹೀನಾನಾಂ ಕುರ್ವೇ ಕನ್ನಡಭಾಷಯಾ ॥

ನಿರ್ವಿಘ್ನೇನ ಸಮಗ್ರೋಽಸ್ತು ಮತ್ಕೃತಾಶೌಚನಿರ್ಣಯಃ ।
ಯದಿ ದೋಷೇ ಸಮುತ್ಪನ್ನೇ ಕ್ಷಮ್ಯತಾಂ ಧರ್ಮಕೋವಿದೈಃ ॥

ಇತಿ ವಿಜ್ಞಪ್ತಿಃ॥

ಸಂಗ್ರಾಹಕರು= ವೇ॥ಮೂ॥ ತಿಮ್ಮಣ್ಣ ರಾಮಕೃಷ್ಣ ಭಟ್ಟ ಬಾಲೀಗದ್ದೆ.

ಪೋ: ನಂದೊಳ್ಳಿ,. ತಾ: ಯಲ್ಲಾಪುರ. ಉ.ಕ

## ಅಥ ಪ್ರಥಮ ನಿರ್ಣಯಃ

### ೧. ಆಶೌಚ ಲಕ್ಷಣ ಮತ್ತು ಆಚರಿಸುವ ವಿಧಾನ

ಮುಖ್ಯ ಕರ್ತೃ ಯಜಮಾನನಿಗೆ ಪಿಂಡೋದಕ ದಾನಾದಿಗಳಿಗೆ ನಿಮಿತ್ತವಾದ ಸಪಿಂಡ ಸಮಾನೋದಕರಿಗೆ ಉದಕಾಂಜಲಿ ಪ್ರದಾನಗಳಿಗೆ ನಿಮಿತ್ತವಾದ ಬಂಧುಗಳಿಗೆ ಸ್ನಾನಾದಿಗಳಿಗೆ ನಿಮಿತ್ತವಾದ ಕಾಲ ಮತ್ತು ಸ್ನಾನದಿಂದ ಶುದ್ಧಿಯನ್ನು ಹೊಂದಬೇಕಾದ ಪುರುಷನಲ್ಲಿರುವ ಯಾವುದೋ ಒಂದು ಅನಿರ್ವಚನೀಯ ಅತಿಶಯ ಅಶುದ್ಧಿ ವಿಷಯವಿಶೇಷವೇ ಆಶೌಚವೆಂದು ಹೇಳಿರುವರು. ಇಲ್ಲಿ ಪುರುಷನಲ್ಲಿರುವ ಎಂಬ ಪುರುಷಪದವು ಉಪಲಕ್ಷಣವಾದ್ದರಿಂದ ಸ್ತ್ರೀಯರಲ್ಲಿಯೂ ಆಶೌಚವಿರುತ್ತದೆ. ಮುಖ್ಯ ಯಜಮಾನನ ಏಕಶರೀರಾವಯವ ಅನ್ವಯತ್ವವು ಸಾಕ್ಷಾತ್ ಅಥವಾ ಪರಂಪರೆಯ ಮೂಲಕ ಸೇರಿಕೊಳ್ಳುವುದರಿಂದ ಇತರ ಸಪಿಂಡರು, ಸಕುಲ್ಯರು, ಬಂಧುಗಳು ಆಶೌಚವನ್ನು ಆಚರಿಸಬೇಕು. ಜಾತಾಶೌಚದಲ್ಲಿ ಸಂತತಿಯ ಉತ್ಸವ ಸಂತೋಷ ಸಮಯವಾದ್ದರಿಂದ ಅವಯವ ಕಣಗಳು ಬದಲಾವಣೆಯಾಗುವುದರಿಂದ ಜಾತಾಶೌಚವನ್ನೂ ಆಚರಿಸಬೇಕು.

ಜನನ ಕಾಲದಲ್ಲಿ ಹೆಂಡತಿಗೆ ಪ್ರಸೂತಿಯೆಂಬ ಹೆಸರು ಬರುತ್ತದೆ. ಪ್ರಸೂತಿಗೆ ಎಷ್ಟು ದಿವಸ ಆಶೌಚವೋ ಅಷ್ಟು ದಿವಸ ಪ್ರಸೂತಿಯ ಪತಿಗೂ (ಗಂಡನಿಗೂ) ಅವನ ಸಪಿಂಡರಿಗೂ ಆಶೌಚವಿರುತ್ತದೆ. ಮತ್ತು ಸಕುಲ್ಯ ಬಂಧುಗಳಿಗೂ ಸಹ ಅವರಿಗೆ ಹೇಳಿದಷ್ಟು ದಿವಸ ಆಶೌಚವಿರುತ್ತದೆ. ಈ ರೀತಿಯ ಆಶೌಚವು ತಿಳಿದ ಮೇಲೆಯೇ ಆಚರಣೆಗೆ ಬರುತ್ತದೆ.

---

**ಶತಶ್ಲೋಕೀ:–** ನಿಮಿತ್ತಂ ಪಿಂಡದಾನಾದೇಃ ಪುರುಷಸ್ಥಮಶುದ್ಧಿಕೃತ್ ।
ಕಾಲಸ್ನಾನಾಪನೋದ್ಯಂ ಯತ್ ತದಾಶೌಚಮಿತೀರ್ಯತೇ ॥

**ದಕ್ಷಃ :–** ಸೂತಕಂ ತು ಪ್ರವಕ್ಷ್ಯಾಮಿ ಮೃತಿ–ಜನ್ಮನಿಮಿತ್ತಕಮ್ ।

**ಸ್ಮೃತಿಸಾರಸರ್ವಸ್ವ ವ್ಯಾಖ್ಯಾ:–**

ಮುಖ್ಯಕರ್ತುಃ ದಶಾಹಾದಿಸಪಿಂಡೀಕರಣಾಂತಪ್ರೇತಕೃತ್ಯಸ್ಯ, ಸಪಿಂಡಸಮಾನೋದಕಯೋಃ ಉದಕಾಂಜಲಿಪ್ರದಾನಸ್ಯ, ಬಂಧೂನಾಂ

ಸ್ನಾನಮಾತ್ರಸ್ಯ, ನಿಮಿತ್ತಭೂತಂ ಯತ್ ಪುರುಷಸ್ಥಮ್ ಉಪಲಕ್ಷಣಮೇತತ್ •ಕಾಲಶಬ್ದೇನ ಪಕ್ಷಿಣ್ಯಹಸ್ತ್ರ್ಯಹದಶಾಹಾದಯಃ ಉಚ್ಯಂತೇ । ಸ್ನಾನಮಾತ್ರಂ ಸಚೇಲಾಸಚೇಲರೂಪಮ್ । ಕಾಲೇನ, ಸ್ನಾನೇನ, ಕಾಲ–ಸ್ನಾನಾಭ್ಯಾಂ ಅಪನೋದ್ಯಮಿತಿ ವಿಭಜ್ಯ ಅರ್ಥೋ ವಿಜ್ಞೇಯಃ । ಏವಂ ಭೂತಂ ಯತ್ ತದೇವ ಆಶೌಚಶಬ್ದವಾಚ್ಯಮ್ ।

**ಸ್ಮೃತಿಸಾರಸರ್ವಸ್ವ :–** ಏತಚ್ಚ ಅಘಂ ಜ್ಞಾತಮೇವ ಕರ್ಮಾನರ್ಹಕೃತ್ ಭವತಿ, (ನತು ಉತ್ಪತ್ತಿಮಾತ್ರೇಣ) ।

**ತಾತ್ಪರ್ಯಬೋಧಿನೀವ್ಯಾಖ್ಯಾ:–** ಸರ್ವತ್ರ ಜ್ಞಾತಮೇವ ಆಶೌಚಮ್ ಅಶುಚಿತ್ವಾಪಾದಕಂ ಭವತಿ, ನತು ಉತ್ಪನ್ನಮಾತ್ರೇಣ ।

**ಮನು–ಯಾಜ್ಞವಲ್ಕ್ಯವಚನಂ:–** ಶ್ರುತ್ವಾ ತದ್ದಿನಮಾರಭ್ಯ, ಜ್ಞಾತ್ವಾ ತದ್ದಿನಮಾರಭ್ಯ ।

**ಯಮಃ :–** ಜ್ಞಾನಾತ್ಸಮಾಚರೇತ್ ಶೌಚಂ ಹ್ಯವಶಿಷ್ಟದಿನಾನಿ ಚ । ಇತಿ ।
ಜ್ಞಾನೋತ್ತರಕಾಲೇ ಹ್ಯವಶಿಷ್ಟದಿನಾನಿ ಗ್ರಾಹ್ಯಾಣಿ ಭವಂತಿ ।
ನ ತು ಪುನಃ ದಶಾಹಾದಯಃ। ಗತದಿನಾನಿ ಗತಾರ್ಥಾಃ ಭವಂತಿ ಇತಿ ನಿಯಮಾತ್ ।

**ಸ್ಮೃತಿಸಾರಸಮುಚ್ಚಯೇ–** ಭಾರ್ಯಾಪ್ರಸೂತಿಸಂಬಂಧಾತ್ ಸೂತಿರೇಷಾ ನಿಗದ್ಯತೇ।
ಯಾವದ್ಚತುರ್ಥರಘಂ ತಸ್ಯ ಸಪಿಂಡಾನಾಂ ನ ಗಚ್ಛತಿ ॥

## ೨. ಅಶೌಚದಲ್ಲಿ ಮಾಡಬಾರದ ಸಾಮಾನ್ಯ ನಿಯಮ

ಜಾತಾಶೌಚ ಮತ್ತು ಮೃತಾಶೌಚಗಳೆರಡರಲ್ಲಿಯೂ ಯಾವುದೇ ವಿಧದ ಧಾರ್ಮಿಕ ವಿಧಿ–ವಿಧಾನಗಳನ್ನು ಆಚರಿಸಬಾರದು. ಈ ಅಶೌಚಗಳೆರಡರಲ್ಲಿಯೂ ವೇದಾಧ್ಯಯನ ಮತ್ತು ಅಧ್ಯಾಪನಗಳನ್ನು ಮಾಡಬಾರದು. ಆಶೌಚವಿರುವ ಮನೆ, ಪಾತ್ರ, ವಸ್ತ್ರ, ದ್ರವ್ಯ ಮೊದಲಾದವುಗಳು ಅಶುಚಿಯಾಗಿರುತ್ತವೆ. ಮೃತಾಶೌಚದಲ್ಲಿ ಬೇರೆಯವರನ್ನು ಮುಟ್ಟಬಾರದು. ಬೇರೆಯವರ ಮನೆಯಲ್ಲಿ ಊಟ ವಸತಿ ಮೊದಲಾದ ಸಂಪರ್ಕಗಳನ್ನು ಸಹ ಮಾಡಬಾರದು.

---

**ಶತಶ್ಲೋಕೀ:–** ಶಾವೇ ಚ ಸೂತಕೇಽಪ್ಯಾರ್ಯೇ ಕರ್ಮಣಾಂ ತ್ಯಾಗ ಇಷ್ಯತೇ ।
ದ್ರವ್ಯಾಣ್ಯಪಿ ಪ್ರದುಷ್ಯಂತಿ ಸ್ವಾಧ್ಯಾಯಶ್ಚ ನಿವರ್ತತೇ ॥

## ೩. ಸಂಧ್ಯಾವಂದನಾದಿ ವಿಚಾರ.

ಜಾತಾಶೌಚ–ಮೃತಾಶೌಚಗಳೆರಡರಲ್ಲಿಯೂ ಆಶೌಚವುಳ್ಳವರು ಸ್ನಾನವನ್ನು ಮಾಡಿ, [ಒದ್ದೆಬಟ್ಟೆಯಲ್ಲಿಯೇ] ನಿತ್ಯಸಂಧ್ಯಾವಂದನೆ ಕಾರ್ಯವನ್ನು ಮನಸ್ಸಿನಲ್ಲಿಯೇ

ಮಾಡಬೇಕು. ಸೂರ್ಯನಿಗೆ ಅರ್ಘ್ಯಪ್ರದಾನವನ್ನು ಮಾತ್ರ ವಾಚಿಕವಾಗಿ [ಸ್ಪಷ್ಟವಾಗಿ ಮಂತ್ರವನ್ನು ಹೇಳಿ] ಮಾಡಬೇಕು. ಉಳಿದ ಮಾರ್ಜನ-ಉಪಸ್ಥಾನ-ಗಾಯತ್ರೀಜಪಾದಿಗಳನ್ನು ಮನಸ್ಸಿನಲ್ಲಿಯೇ ಮಾಡಬೇಕು. ಅಗ್ನಿಹೋತ್ರಿಗಳು ಪೂರ್ವಸಂಕಲ್ಪಿತದ್ರವ್ಯಗಳಿಂದ ಸಾಯಂ-ಪ್ರಾತಃ ಅಗ್ನಿಹೋತ್ರವನ್ನು ಮಾತ್ರ ಸ್ನಾನವನ್ನು ಮಾಡಿ, ಮಾಡಬಹುದೆಂದು ಕೆಲವರ ಅಭಿಪ್ರಾಯವಿದೆ. ಆದರೆ ಪೂರ್ವಸಂಕಲ್ಪಿತದ್ರವ್ಯವನ್ನು ಸಹ ಬೇರೆಯವರಿಂದ [ಅಶೌಚವಿಲ್ಲದವರಿಂದ] ವಿನಿಯೋಗಿಸಬೇಕೆಂಬ ಅಭಿಪ್ರಾಯವೂ ಇದೆ. ಇಷ್ಟಿ-ಪಶುಬಂಧಾದಿ ಯಾಗಗಳನ್ನು ಸ್ವತಃ ಅಶೌಚದಲ್ಲಿ ಮಾಡಬಾರದು. ಪ್ರೇತನಿಗೆ ಪಿಂಡೋದಕಪ್ರದಾನಾದಿಗಳನ್ನು ಅಶೌಚದಲ್ಲಿಯೂ ಸ್ನಾನವನ್ನು ಮಾಡಿ, [ಒದ್ದೆ ವಸ್ತ್ರದಲ್ಲಿ] ಮಾಡಬೇಕು. ಬಲವತ್ತರವಾದ ಯಾವುದೇ ಅಶೌಚವಿದ್ದರೂ ಸಹ ದಹನಾದಿ ಏಕೋದ್ದಿಷ್ಟಾಂತದವರೆಗೂ ಪ್ರೇತನಿಗೆ ಪಿಂಡೋದಕಗಳನ್ನು ಔರಸ ಪುತ್ರನು ನಡೆಸಲೇಬೇಕು. ಇವಿಷ್ಟನ್ನು ಬಿಟ್ಟು ಉಳಿದ ಯಾವುದೇ ಕರ್ಮಗಳನ್ನು ಅಶೌಚವಿರುವವರು ಮಾಡಬಾರದು. ಒಮ್ಮೆ ನಾಸ್ತಿಕನಾಗಿಯೋ ಅಥವಾ ಅಹಂಕಾರದಿಂದಲೋ ಮಾಡಿದರೆ ಅವನು ಮೊದಲು ಮಾಡಿದ ಸತ್ಕರ್ಮಗಳ ಪುಣ್ಯಗಳು ನಾಶವಾಗುವುದೆಂದು ಸ್ಮೃತಿಗಳಲ್ಲಿ ಹೇಳಿದೆ.

---

**ಆಶೌಚಶತಕೇ:-** ಸಾಂಧ್ಯಂ ಕರ್ಮಾಗ್ನಿಹೋತ್ರಂ ಚ ಪ್ರೇತಕರ್ಮಾಣಿ ಚಾಪ್ಲುತಃ ।
ಕುರ್ಯಾದನ್ಯೇನ ಹೋಮಂ ತು ಕಾರಯೇನ್ನಾನ್ಯದಾಚರೇತ್ ॥

**ಸ್ಮೃತಿಸಾರಸರ್ವಸ್ವೇ-** ಸಾಂಧ್ಯಂ ಕರ್ಮ= ಸಂಧ್ಯಾವಂದನಮ್, ಏತಚ್ಚ ಮಾನಸಮೇವ, ನ ತು ವಾಚಿಕಮ್। ಅಗ್ನಿಹೋತ್ರಮಿತಿ= ಸಾಯಂ ಪ್ರಾತಃ ಹೋಮಮಾತ್ರಮುಚ್ಯತೇ, ನ ತ್ವಿಷ್ಟಿಪಶುಬಂಧಾದಿ । ಪ್ರೇತಕರ್ಮಾಣಿ= ಪ್ರೇತಪಿಂಡೋದಕಾದೀನಿ । ಏತಾನಿ ಸ್ನಾತಃ ಕುರ್ಯಾತ್, ನಾನ್ಯತ್ಕಿಂಚಿದಾಚರೇದಿತ್ಯರ್ಥಃ ।

**ಪಾರಿಜಾತೇ :-** ಸೂತಕೇ ಮೃತಕೇ ಚೈವ ಪ್ರಾಣಾಯಾಮಮಮಂತ್ರಕಮ್
ತಥಾ ಮಾರ್ಜನಮಂತ್ರಾಂಸ್ತು ಮನಸೋಚ್ಚಾರ್ಯ ಮಾರ್ಜಯೇತ್ ॥
ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್ ।

**ವ್ಯಾಸಃ :-** ಪ್ರಕ್ಷಿಪೇತ್ಸೂತಕೇ ತ್ವರ್ಘ್ಯಂ ಗಾಯತ್ರೀಂ ತು ಸಮುಚ್ಚರನ್ ।
ದತ್ವಾ ಪ್ರದಕ್ಷಿಣಂ ಕುರ್ಯಾತ್ ಸೂರ್ಯಂ ಧ್ಯಾಯೇತ್ ತತೋ ದ್ವಿಜಃ ॥

**ಪುಲಸ್ತ್ಯಃ :-** ಸಂಧ್ಯಾಮಿಷ್ಟಿಂ ಚರುಂ ಹೋಮಂ ಯಾವಜ್ಜೀವಂ ಸಮಾಚರೇತ್ ।
ನ ತ್ಯಜೇತ್ಸೂತಕೇ ಚಾಪಿ ತ್ಯಜನ್ ಗಚ್ಛೇದಧೋ ದ್ವಿಜಃ ॥

ಅತ್ರ ಅನನ್ಯಸಾಂಧ್ಯೇಷ್ಟ್ಯಾದಿಕಮಪ್ಯಾಚರೇತ್ । ಶಿವಯತ ಅನನ್ಯಸಾಂಧ್ಯೇಷ್ಟ್ಯಾದಿಕಮಿತಿ, ಸಂಧ್ಯಾಯಾ ಏವ ಆವಶ್ಯಕಾರ್ಯತ್ವದ್ಯೋತನಾರ್ಥಂ

ಇಷ್ಟಿ–ಚರಾಗ್ರಹಣವತ್ । ಅಥವಾ ಅಘಾಗಮಾತ್ ಪ್ರಾಕ್ ಪ್ರಾರಬ್ಧೇಷ್ಟಿಚರ್ವನುಷ್ಠಾನಪ್ರತಿಪಾದನಪರಮಿತಿ ಅವಿರೋಧಃ । ಯತಃ ಸ ಏವಾಹ – ಸೂತಕೇ ಮೃತಕೇ ಚಾಪಿ ಸಂಧ್ಯಾಕರ್ಮ ಸಮಾಚರೇತ್ । ಮನಸೋಚ್ಚಾರಯೇನ್ಮಂತ್ರಾನ್ ಪ್ರಾಣಾಯಾಮಮೃತೇ ದ್ವಿಜಃ ॥ ಇತಿ ॥ "ಸಂಧ್ಯಾವಂದನವಿಚ್ಛಿತ್ತಿಃ ನ ದೋಷಾಯ ಕದಾಚನ" ಇತಿ ತು (ಆಪದ್ವಿಷಯಃ) ನ ದೋಷಃ ಮನಸ್ಯೈವ ಕೃತತ್ವಾತ್ । ಅಥವಾ ತದಪವಾದಾರ್ಥಃ, ಯತಃ – "ನ ತ್ಯಜೇತ್ಸೂತಕೇ ವಾಪಿ ತ್ಯಜನ್ಗಚ್ಛೇದಧೋ ದ್ವಿಜಃ" ಇತಿ ತ್ಯಾಗೇ ಪ್ರತ್ಯವಾಯಶ್ರವಣಾತ್ ಇತಿ ದಿಕ್ ॥

ಅಂಗಿರಾಃ– ಅಘಾಂತರಾದಶುದ್ಧೋऽಪಿ ಏಕೋದ್ದಿಷ್ಟಾಂತಮಾಚರೇತ್ ।
ಇತ್ಯುಕ್ತಂ ಪಿತ್ರೋರ್ಮರಣೇ ಔರಸಪುತ್ರಸ್ಯ ಕೃತ್ಯಮಿತಿ ।

ಅನ್ಯತ್ರ – ನಾಸ್ತಿಕ್ಯಾತ್ ಸೂತಕೇ ಯಸ್ತು ಪುಣ್ಯಕರ್ಮಾಣಿ ಸಾಧಯೇತ್ ।
ತಸ್ಯ ಪೂರ್ವಕೃತಂ ಪುಣ್ಯಂ ಸದ್ಯ ಏವ ವಿನಶ್ಯತಿ ॥

### ೪. ಅಶೌಚದಲ್ಲಿ ದೇವಪೂಜಾ ವಿಚಾರ

ಅಶೌಚವಿರುವವರು ಅಶೌಚದಲ್ಲಿ ಯಾವುದೇ ರೀತಿಯ ದೇವಪೂಜಾ–ಜಪ–ಹೋಮ–ದಾನಾದಿಗಳನ್ನು ಮಾಡಬಾರದು. ಬೇರೆಯವರಿಂದ ಮಾಡಿಸಬೇಕೆಂಬ ವಚನವು ಮೊದಲೇ ಸಂಕಲ್ಪ ಮಾಡಿದ ವಿಷಯವೆಂದು ತಿಳಿಯಬೇಕು. ಸಂಧ್ಯಾವಂದನೆಯಂತೆ ದೇವಪೂಜೆಯನ್ನು ಮಾನಸಿಕವಾಗಿ ಮಾಡಬೇಕೆಂಬುದಕ್ಕೆ ಯಾವುದೇ ಪ್ರಮಾಣವಚನವಿರುವುದಿಲ್ಲ. ಅಶೌಚದಲ್ಲಿ ವಾಚಿಕವಾಗಿ [ಸ್ಪಷ್ಟವಾಗಿ] ವೇದಮಂತ್ರಗಳನ್ನು ಉಚ್ಚರಿಸಬಹುದೆಂಬುದಕ್ಕೆ ಯಾವ ಪ್ರಮಾಣವಚನಗಳೂ ಸಿಗುವುದಿಲ್ಲ. ಅಷ್ಟೇ ಅಲ್ಲ, ವಾಚಿಕವಾಗಿ ಹೇಳಬಾರದೆಂಬುದಕ್ಕೆ ನಿಷೇಧವಚನಗಳು ಸಾಕಷ್ಟು ಕಂಡುಬರುತ್ತವೆ. ಅಶೌಚದಲ್ಲಿ ನಿತ್ಯಕರ್ಮಗಳು ವಿಚ್ಛಿತ್ತಿಯಾದರೆ [ನಿತ್ಯಕರ್ಮಗಳನ್ನು ಮಾಡದಿದ್ದರೆ] ಪ್ರತ್ಯವಾಯವಿಲ್ಲ. [ದೋಷವಿಲ್ಲ.] ಅಶೌಚದಲ್ಲಿ ವ್ರತಾದಿನಿಯಮಗಳನ್ನೂ, ಉಪವಾಸಾದಿ ಶಾರೀರಕವಾದ ನಿಯಮಗಳನ್ನೂ ಆಚರಿಸಬೇಕು. ಕೆಲವರು ಪೂಜೆಯನ್ನು ಮಾತ್ರ ಅಶೌಚವಿಲ್ಲದವರಿಂದ [ಪ್ರತಿನಿಧಿಯಿಂದ] ಅರ್ಚನೆ ಮೊದಲಾದವುಗಳನ್ನು ಮಾತ್ರ ಮಾಡಿಸಿ, ಆಶೌಚ ಶುದ್ಧಿಯ ನಂತರ ದಾನ ಬ್ರಾಹ್ಮಣಭೋಜನ, ಆಶೀರ್ವಾದಗ್ರಹಣ ಮಾಡಬೇಕೆಂದು ಸೂಚಿಸಿರುವರು. ಅಥವಾ ನಿಯತವಾದ ನಿತ್ಯಕರ್ಮಗಳನ್ನು ಅಶೌಚದಲ್ಲಿ ಪರಿತ್ಯಜಿಸಿ, [ಬಿಟ್ಟು] ಶುದ್ಧಿಯಾದ ನಂತರ ಪುನಃ ಆವೃತ್ತಿರೂಪದಲ್ಲಿ ಆಚರಿಸಬಹುದೆಂದು ಜಾಬಾಲಿ ಮೊದಲಾದವರು ಹೇಳುತ್ತಾರೆ. ಅಶೌಚದಲ್ಲಿ ನಿತ್ಯಕರ್ಮಗಳನ್ನು ಬಿಟ್ಟರೂ ದೋಷವಿಲ್ಲವೆಂಬುದು ಮನ್ವಾದಿಗಳ ಆಶಯವಾಗಿದೆ. "ನ ಹ್ಯತ್ರ ಮನಸ ಉಪಘಾತಃ" ಎಂಬ ಶ್ರುತಿಯ ಪ್ರಕಾರ ಮನಸ್ಸಿನಿಂದ ಮಾಡಿದ

ಕರ್ಮಗಳನ್ನು ಆವೃತ್ತಿಮಾಡಬೇಕೆಂಬುದಿಲ್ಲ. ಅಂದರೆ ಕರ್ಮಲೋಪಪ್ರಸಕ್ತಿಯು ಬರುವುದಿಲ್ಲ; ದೇವಪೂಜಾದಿಗಳಿಗೆ ಮಾನಸಪ್ರಕ್ರಿಯೆಯನ್ನು ಹೇಳಲಿಲ್ಲವಾದ್ದರಿಂದ ಅಶೌಚದಲ್ಲಿ ದೇವಪೂಜೆಯನ್ನು ಬಿಡಲೇಬೇಕು ಅಥವಾ ಅಶೌಚವಿಲ್ಲದವರಿಂದ ಮಾಡಿಸಬೇಕು. ದೇವಪೂಜೆಯನ್ನು ಮಾಡುವವರು ಯಾವುದೇ ರೀತಿಯ ಅಶೌಚ ಸಂಪರ್ಕವನ್ನು ಹೊಂದಬಾರದು.

ಅಶೌಚದಲ್ಲಿ ದೇವಪೂಜೆಯನ್ನು ಬಿಡುವ, ಮತ್ತು ಬೇರೆಯವರಿಂದ ಮಾಡಿಸುವ, ಎರಡೂ ರೀತಿಯ ಆಚಾರವು ನಮ್ಮಲ್ಲಿ [ಹವ್ಯಕರಲ್ಲಿ] ಹಿಂದಿನಿಂದಲೂ ನಡೆದುಬಂದಿದೆ.

---

**ಬೃಹಸ್ಪತಿಃ** :– ಸೂತಕೇ ಮೃತಕೇ ಚೈವ ಅಶಕ್ತೌ ಶ್ರಾದ್ಧಭೋಜನೇ ।
ಪ್ರವಾಸಾದಿನಿಮಿತ್ತೇಷು ಹಾಪಯೇನ್ನ ತು ಹಾಪಯೇತ್ ॥

**ಶತಶ್ಲೋಕೀವ್ಯಾಖ್ಯಾನಮ್** :– ಸ್ಮಾರ್ತಂ ಕರ್ಮ=ದೇವತಾರ್ಚನ ಜಪ–ಪೂಜಾ [ಹೋಮ] ದಾನಾದಿ । ತಚ್ಚ ಪೂರ್ವಸಂಕಲ್ಪಿತಮಿತಿ ವ್ಯಾಖ್ಯೇಯಮ್ । ಅನ್ಯಥಾ–ತನ್ನಿವೃತ್ತಿಪರಮನ್ವಾದಿವಚನವಿರೋಧಾತ್ ಇತಿ ।

**ಮನುಃ** :– ನ ಕುರ್ಯಾದ್ಯಾವದಾಶೌಚಂ ಸ್ವಾಧ್ಯಾಯಂ ಚ ಸುರಾರ್ಚನಮ್ ।

**ಜಾತೂಕರ್ಣ್ಯಃ** – ಸೂತಕೇ ತು ಸಮುತ್ಪನ್ನೇ ಸ್ಮಾರ್ತಂ ಕರ್ಮ ಕಥಂ ಭವೇತ್ ।
ಪಿಂಡಯಜ್ಞಂ ಚರುಂ ಹೋಮಮ್ ಅಸಗೋತ್ರೇಣ ಕಾರಯೇತ್॥

**ಜಾಬಾಲಿಃ** :– ಸಂಧ್ಯಾಂ ಪಂಚಮಹಾಯಜ್ಞಾನ್ ನ ತ್ಯಜೇತ್ ಸ್ಮಾರ್ತಕರ್ಮ ಚ ।
ತನ್ಮಧ್ಯೇ ಹಾಪಯೇದೇಷಾಂ ದಶಾಹಾಂತೇ ಪುನಃ ಕ್ರಿಯಾ ॥

**ಸಂಗ್ರಹೇ** :– ದಶಾಹಾತ್ತು ಪರಂ ಸಮ್ಯಗ್ವಿಪ್ರಃ ಕುರ್ವೀತ ಧರ್ಮವಿತ್ ।

## 7. ಆಶೌಚದ ಮಧ್ಯದಲ್ಲಿ "ದರ್ಶ" ಸಂಕ್ರಾಂತಿ ಬಂದರೆ?

ಆಶೌಚದ ಮಧ್ಯದಲ್ಲಿ "ದರ್ಶ"ವು (ಅಮಾವಾಸ್ಯೆಯನ್ನು ಮತ್ತು ಅಮಾವಾಸ್ಯೆಯಂದು ಮಾಡುವ ಯಾಗವನ್ನು "ದರ್ಶ"ವೆನ್ನುತ್ತಾರೆ) ಪ್ರಾಪ್ತವಾದರೆ ನಿರ್ವಾಪವನ್ನು (ಸಂಸ್ಕರಿಸಿದ ಹವಿಸ್ಸಿನ ಭಾಗವನ್ನು ಆಯಾ ದೇವತೆಗಳ ಹೆಸರಿನಲ್ಲಿ ತೆಗೆದಿರಿಸುವಿಕೆಯನ್ನು "ನಿರ್ವಾಪ"ವೆನ್ನುತ್ತಾರೆ.) ಮಾಡಿದ ಹವಿಸ್ಸನ್ನು ಹೋಮಿಸಬಹುದು; ಮತ್ತು ಆ ಆಶೌಚವನ್ನು ಮಧ್ಯದಲ್ಲಿಯೇ ಅಪಕರ್ಷಿಸಿ ಹತ್ತು ದಿನದ ಪಿಂಡೋದಕಗಳನ್ನು ಮುಗಿಸಿ, ಆಶೌಚವನ್ನೂ ಮುಗಿಸಿ ಮುಂದಿನ ದರ್ಶಶ್ರಾದ್ಧಾದಿಗಳನ್ನು ಆಚರಿಸಬಹುದು. ತಾಯಿ–ತಂದೆಯವರ ಮರಣದಲ್ಲಿ

ಔರಸಪುತ್ರನು ಹತ್ತುದಿನಗಳವರೆಗೆ ಯಥಾವತ್ ಆಶೌಚವವನ್ನು ಸ್ವೀಕರಿಸಿ, ಪ್ರೇತಪಿಂಡೋದಕಾಂಜಲಿಪ್ರದಾನಾದಿಗಳನ್ನು ಮಾಡಬೇಕು. ತಾಯಿ–ತಂದೆಯರ ಮರಣದಲ್ಲಿ ಅವುಗಳನ್ನು ವಿಚ್ಛಿತ್ತಿಗೊಳಿಸಿದರೆ ದೋಷವುಂಟಾಗುವುದು. [ದೋಷ=ಕುಲಕ್ಷಯ] ತಾಯಿ–ತಂದೆಯರ ಪಿಂಡೋದಕಾದಿಗಳನ್ನು ಸಂಕ್ಷೇಪಗೊಳಿಸಿದರೂ ಅದರಿಂದ ಪ್ರಯೋಜನವಿಲ್ಲ. ಏಕೆಂದರೆ ಮುಂದೆ ಉಳಿದ ದಿನಗಳ ಆಶೌಚವನ್ನು ಬಳಸಲೇಬೇಕು.

ಅಂತೂ ನಿರ್ಣಯವೇನಂದರೆ, ತಾಯಿ–ತಂದೆಯವರ ಮರಣಾಶೌಚದಲ್ಲಿ "ದರ್ಶ"ವು ಬಂದರೆ ದರ್ಶಶ್ರಾದ್ಧಾದಿನಿಮಿತ್ತವಾಗಿ ತಾಯಿ–ತಂದೆಯರ ಮರಣಾಶೌಚವನ್ನು ಮುಕ್ತಾಯಗೊಳಿಸಬಾರದು. ಸಮಾಪ್ತಿಪಕ್ಷವನ್ನು ಸ್ಪಷ್ಟವಚನಗಳಿಂದ ನಿಷೇಧಗೊಳಿಸಿರುವುದು ಕಂಡುಬರುತ್ತದೆ. [ಈ ಸಮಾಪ್ತಿಪಕ್ಷವು ತಂದೆ–ತಾಯಿಯರನ್ನು ಬಿಟ್ಟು ಉಳಿದವರಿಗೆ ಅನ್ವಯಿಸುವುದಾಗಿದೆ.] ಆದ್ದರಿಂದ ತಾಯಿ–ತಂದೆಯರ ಮರಣೋತ್ತರ ಹತ್ತು ದಿನಗಳೊಳಗೆ ದರ್ಶವು ಪ್ರಾಪ್ತವಾದರೂ ಪಿಂಡೋದಕಾಂಜಲಿಪ್ರದಾನಾದಿಗಳನ್ನು ನಿಲ್ಲಿಸಬಾರದು, ಮುಂದುವರಿಸಬೇಕು.

---

**ಕಾಲನಿರ್ಣಯೇ** :–ದಶಾಹಮಧ್ಯೇ ಸಂಕ್ರಾಂತಿಃ ದರ್ಶೋ ವಾಥ ಭವೇದ್ಯದಿ ।
ತೋಯಪಿಂಡಂ ಸಮಾಪ್ಯೇತ ತದ್ದಿನೇನೌರಸೇತರೈಃ ॥
[ತದ್ದಿನೇನ+ಔರಸೇತರೈಃ]

**ಸಾಂಖ್ಯಾಯನೇ** :– ದಶಾಹಮಧ್ಯೇ ಯದಿ ದರ್ಶೋ ಭವತಿ ಮಾತೃ–
ಪಿತೃವ್ಯತಿರಿಕ್ತಾನಾಂ ತೇನೈವ [ತತ್ರೈವ] ಪಿಂಡಸಮಾಪನಮ್।]

**ಗೌತಮಃ** :– ಅಂತರ್ದಶಾಹೇ ದರ್ಶಶ್ಚೇತ್ ತತ್ರ ಸರ್ವಂ ಸಮಾಪಯೇತ್ ।
ಪಿತ್ರೋಸ್ತು ಯಾವದಾಶೌಚಂ ದದ್ಯಾತ್ಪಿಂಡಂ ಜಲಾಂಜಲೀನ್ ॥
ಮಧ್ಯೇಽಪಿ ತತ್ಸಮಾಪ್ತಿಶ್ಚೇತ್ ಕುಲಕ್ಷಯಕರೀ ಭವೇತ್ ॥

**ಅಂಗಿರಾಃ** :– ಪಿತ್ರೋಃ ಪಿಂಡಸಮಾಪನೇಽಪ್ಯಾಶೌಚಂ ದಶಾಹಮೇವ ।
ಯಾವದಾಶೌಚಮುದಕಂ ಪಿಂಡಂ ದದ್ಯಾತ್ ದ್ವಿಜೋತ್ತಮಃ ।
ಪಿಂಡದಾನವಿಧೇರೂರ್ಧ್ವಂ ಆಶೌಚಂ ತು ಸಮಾಚರೇತ್ ॥

**ಸಂಗ್ರಹೇ** :– ಮಾತಾಪಿತ್ರೋಃ ದಶಾಹಾಂತಂ ಯಥಾವಿಧಿ ಸಮಾಚರೇತ್ ।
ಮಧ್ಯೇ ಪಿಂಡಸಮಾಪ್ತಿಶ್ಚೇತ್ ಕುಲಕ್ಷಯಕರೀ ಭವೇತ್ ॥

**ಶತಶ್ಲೋಕೀವ್ಯಾಖ್ಯಾನೇ** :– ಮಾತಾಪಿತೃವಿಷಯೇ ದಶಾಹಮಧ್ಯೇ ದರ್ಶಸಂಭವೇಽಪಿ
ಪಿಂಡೋದಕದಾನಾದಿಷು ಸಮಾಪ್ತಿಪಕ್ಷೋ ನಾಸ್ತ್ಯೇವ,
ವಿಪರ್ಯಾಸೇ ಪ್ರತ್ಯವಾಯಶ್ರವಣಾತ್ ।

## ೬. ಆಶೌಚದಲ್ಲಿ ಗ್ರಾಹ್ಯ ಮತ್ತು ಅಗ್ರಾಹ್ಯವಸ್ತು ವಿಚಾರ

ಆಶೌಚದಲ್ಲಿ ಯಾವುದೇ ವಸ್ತುವನ್ನು ದಾನವಾಗಿ ಕೊಡಬಾರದು ಮತ್ತು ತೆಗೆದುಕೊಳ್ಳಬಾರದು. ಆದರೆ-ರಾಷ್ಟ್ರಕ್ಷೋಭೆ, ಅನಾವೃಷ್ಟಿ, ಹೊಟ್ಟೆಗಿಲ್ಲದೇ ಸಾಯುವ ಪರಿಸ್ಥಿತಿ, ಮುಂತಾದ ಮಹದಾಪತ್ಕಾಲದಲ್ಲಿ ದಾನವಾಗಿ ಕೊಡಬಹುದು, ಮತ್ತು ಬೇರೆಯವರು ಸ್ವೀಕರಿಸಬಹುದು. ಅಂತೆಯೇ ಬೇಯಿಸದಿರುವ [ಆಮ] ವಸ್ತುಗಳನ್ನು ಒಂದು ದಿನಕ್ಕಾಗಿ ಮಾತ್ರ ಸ್ವೀಕರಿಸಬಹುದು, ಹಾಲು, ತುಪ್ಪ, ಮೊಸರು, ತರಕಾರಿ, ಹೂವು, ಹಣ್ಣು, ಎಳ್ಳು, ಔಷಧಿ, ಕಟ್ಟಿಗೆ, ಗಡ್ಡೆ-ಗೆಣಸು, ಮಾಂಸ, ಜೇನುತುಪ್ಪ ಮುಂತಾದ ಅಂಗಡಿಯಲ್ಲಿ ಸಿಗುವ ವಸ್ತುಗಳನ್ನು ಅಶೌಚದಲ್ಲಿ ಸ್ವೀಕರಿಸಬಹುದು. ಅನ್ನಛತ್ರದ ಅನ್ನವನ್ನು ಊಟ ಮಾಡಬಹುದೆಂದು ಅಂಗಿರಮುನಿಗಳ ಅಭಿಪ್ರಾಯವಾಗಿದೆ.

ಪುತ್ರಜನ್ಮದ ದಿನದಂದು ಆಶೌಚವಾದರೂ ದಾನವನ್ನು ಮಾಡಬಹುದು ಮತ್ತು ಬೇರೆಯವರು ಅದನ್ನು ಸ್ವೀಕರಿಸಬಹುದು. ಏಕೆಂದರೆ ಪುತ್ರಜನ್ಮದಿನವು ಅತ್ಯಂತ ಪುಣ್ಯದಿನವೆಂದು ತಿಳಿಯಬೇಕು.

ಆಶೌಚವೆಂದು ತಿಳಿದಿದ್ದರೂ, ಯಾರಿಗೂ ಹೇಳದೆ [ಮುಚ್ಚಿಟ್ಟು] ಲೋಭದಿಂದ ಅಥವಾ ಅಹಂಕಾರದಿಂದ ದಾನ-ಪ್ರತಿಗ್ರಹಗಳನ್ನು ಮಾಡಿದರೆ ಅವನು ಮೊದಲು ಗಳಿಸಿದ ಸತ್ಕರ್ಮಗಳ ಫಲವಾದ ಪುಣ್ಯಗಳು ನಾಶವಾಗುವವು. ಆದ್ದರಿಂದ ಆಪತ್ಕಾಲದ ಸಂಗತಿಗಳನ್ನು ಹೊರತುಪಡಿಸಿ, ಅಶೌಚದಲ್ಲಿ ಯಾವುದೇ ದಾನ-ಪ್ರತಿಗ್ರಹಗಳನ್ನು ಮಾಡಬಾರದು.

---

**ಆಶೌಚ ಶತಕೇ :-** ನ ದೇಯಂ ನ ಪ್ರತಿಗ್ರಾಹ್ಯಂ ಅಘೇ ದೇಯಂ ಸದಾಪದಿ ।
ಗ್ರಾಹ್ಯಂ ಪರೈಶ್ಚ ತತ್ರಾಽಮಂ ತದಹರ್ಮಾತ್ರವೃತ್ತಯೇ ॥

ದಧಿ ಕ್ಷೀರಂ ಘೃತಂ ಶಾಕಂ ಪಟು ಪುಷ್ಪಂ ತಿಲೌಷಧೌ ।
ಕಾಷ್ಠಂ ಮೂಲಂ ಫಲಂ ಮಾಂಸಂ ಮಧು ಕೂಪಾಂಬು ಚಾಜಿನಂ ।
ಪಣ್ಯಾನ್ಯಘೇಽಪಿ ಗೃಹ್ಣೀಯಾತ್ ಸ್ವಯಂ ತು ಸ್ವಾಮ್ಯನುಜ್ಞಯಾ ॥
ಭಕ್ಷ್ಯಜಾತಂ ತಥಾ ಪಕ್ವಂ ಅಪಕ್ವಂ ತಂಡುಲಾದಿಕಂ ॥

ಅನ್ನಸತ್ರರತಸ್ಯೈವ ಗ್ರಾಹ್ಯಮಿತ್ಯಂಗಿರಾ ಮುನಿಃ ॥
ಪುಣ್ಯತ್ವಾತ್ ಪುತ್ರಜನ್ಮಾಹೇ ದೇಯಂ ಗ್ರಾಹ್ಯಂ ತಥಾ ಪರೈಃ ॥

**ಗಾರುಡೇ :-** ಪ್ರಚ್ಛಾದ್ಯ ಸೂತಕಂ ಯಸ್ತು ಗೃಹ್ಣಾತಿ ಚ ದದಾತಿ ಚ ।
ತಸ್ಯ ಪೂರ್ವಕೃತಂ ಪುಣ್ಯಂ ಸದ್ಯ ಏವ ವಿನಶ್ಯತಿ ॥

## ೭. ಆಶೌಚಾನ್ನ ಊಟದ ವಿಚಾರ

ಆಶೌಚವಿರುವವರ ಅನ್ನವನ್ನು ಬುದ್ಧಿಪೂರ್ವಕವಾಗಿ ಊಟ ಮಾಡಿದರೆ ಅವರ ಉಳಿದ ದಿನಗಳ ಆಶೌಚವನ್ನು ಊಟ ಮಾಡಿದವನೂ ಬಳಸಬೇಕು, ಮತ್ತು ಆ ಆಶೌಚದ ಕೊನೆಯಲ್ಲಿ ಚಾಂದ್ರಾಯಣ-ಸಾಂತಪನ-ಪ್ರಾಜಾಪತ್ಯ ಮೊದಲಾದ "ಕೃಚ್ಛ್ರವ್ರತಗಳನ್ನು ಅಶೌಚದ ತರತಮಭಾವವನ್ನನುಸರಿಸಿ, ನಡೆಸಬೇಕು.

ಬ್ರಹ್ಮಕೂರ್ಚವಿಧಿ ಪಂಚಗವ್ಯಪ್ರಾಶನ, ಮೂರುದಿನಗಳ ಉಪವಾಸ, ಗಾಯತ್ರೀಜಪ, ಮೊದಲಾದವುಗಳನ್ನು ಪ್ರಾಯಶ್ಚಿತ್ತವಾಗಿ ಆಚರಿಸಬೇಕು. ಅಜ್ಞಾನದಿಂದ ಊಟಮಾಡಿದರೆ ಸಂಪೂರ್ಣವಾಗಿ "ನಿಷ್ಪುರೀಷಭಾವ"ವನ್ನು [ಸಂಪೂರ್ಣ ಮಲವಿಸರ್ಜನೆಯ ನಂತರ, ಅಂದರೆ ಮೂರು ದಿನ ಅಥವಾ ಐದುದಿನ ಅಥವಾ ಏಳುದಿನದ ನಂತರ] ಹೊಂದಿ, ಅನಂತರ ಗವ್ಯಪ್ರಾಶನ, ಗಾಯತ್ರೀ ಜಪಾದಿಗಳಿಂದ ಶುದ್ಧಿಯನ್ನು ಹೊಂದಬೇಕು.

ಬ್ರಾಹ್ಮಣರ ಅಶೌಚಾನ್ನವನ್ನು ಉಂಡರೆ ಎರಡು ಸಾವಿರ, ಕ್ಷತ್ರಿಯಾನ್ನವನ್ನು ಉಂಡರೆ ಮೂರು ಸಾವಿರ, ವೈಶ್ಯರ ಅಶೌಚಾನ್ನವನ್ನು ಉಂಡರೆ ಐದು ಸಾವಿರ, ಹಾಗೂ ಶೂದ್ರರ ಅಶೌಚಾನ್ನವನ್ನು ಉಂಡರೆ ಎಂಟು ಸಾವಿರ ಗಾಯಯತ್ರೀ ಜಪವನ್ನು ಮಾಡಬೇಕು.

ಆಶೌಚವಿರುವವರಿಂದ ಪಾನೀಯವನ್ನು ಸ್ವೀಕರಿಸಿದರೆ ಪಂಚಗವ್ಯಪ್ರಾಶನವನ್ನು ಮಾಡಬೇಕು. ಒಂದೇ ಮನೆತನದವರಾದರೆ [ದಾಯಾದಿಗಳಾದರೆ] ಅಶೌಚಾನ್ನವನ್ನು ಉಂಡರೂ ದೋಷವಿಲ್ಲವೆಂದು ಮನು-ವಿಜ್ಞಾನೇಶ್ವರಾದಿಗಳು ಹೇಳಿರುವರು. ಯಾಕೆಂದರೆ ಅವರು [ದಾಯಾದಿಗಳು] ಅಶೌಚವನ್ನು ಬಳಸುವವರೇ ಆಗಿರುತ್ತಾರೆಂದು ತಿಳಿಯಬೇಕು. [ಕುಲ, ವಂಶ, ದಾಯಾದಿ=ಈ ಶಬ್ದಗಳು ಬೇರೆ-ಬೇರೆ ಅರ್ಥವನ್ನು ಕೊಡುತ್ತವೆ ಎಂಬುದು ಗಮನದಲ್ಲಿರಿಸಬೇಕಾದ ಸಂಗತಿಯಾಗಿದೆ.]

---

**ಸ್ಮೃತಿಸಂಗ್ರಹೇ :-** ಸೂತಕಾನ್ನಂ ನವಶ್ರಾದ್ಧಂ ಮಾಸಿಕಾನ್ನಂ ತಥೈವ ಚ ।
ಹೀನಾಚಾರದ್ವಿಜಸ್ಯಾನ್ನಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥

**ಪರಾಶರಃ :-** ಜ್ಞಾನಾತ್ಸಮಾಚರೇತ್ ಕೃಚ್ಛ್ರಂ ಬ್ರಹ್ಮಕೂರ್ಚಂ ಪಿಬೇದ್ದ್ವಿಜಃ ।
ಅಜ್ಞಾನಾತ್ ಭುಂಜತೇ ವಿಪ್ರಾಃ ಸೂತಕೇ ಮೃತಕೇಽಪಿ ವಾ ॥

ಪ್ರಾಯಶ್ಚಿತ್ತಂ ಕಥಂ ತೇಷಾಂ ವರ್ಣೇ ವರ್ಣೇ ವಿನಿರ್ದಿಶೇತ್ ।
ಗಾಯತ್ರ್ಯಷ್ಟಸಹಸ್ರೇಣ ಶುದ್ಧಿಃ ಸ್ಯಾತ್ ಶೂದ್ರಸೂತಕೇ ॥

ಅಥ ಪ್ರಥಮ ನಿರ್ಣಯಃ

ವೈಶ್ಯೇ ಪಂಚಸಹಸ್ರೇಣ ತ್ರಿಸಹಸ್ರೇಣ ಕ್ಷತ್ರಿಯೇ ।
ಬ್ರಾಹ್ಮಣಸ್ಯ ಯದಾ ಭುಂಕ್ತೇ ದ್ವೇ ಸಹಸ್ರೇ ತು ಜಾಪಯೇತ್ ।
ಪಾನೀಯಪಾನೇ ಕುರ್ವೀತ ಪಂಚಗವ್ಯಸ್ಯ ಪ್ರಾಶನಂ ॥

**ಬೋಧಾಯನಃ:-** ಅನಿರ್ದಶಾऽಸಂಧಿನೀಕ್ಷೀರಂ ಅಪೇಂಯಾವತ್ । ಅವತ್ಸಾऽನ್ಯವತ್ಸಯೋಶ್ಚ । ಆವಿಕಮೌಷ್ಟ್ರಿಕಮೇಕಶಫಮಪೇಯಪಯಃಪಾನೇ ಕೃಚ್ಛ್ರಃ ಅನ್ಯತ್ರ ಗವ್ಯಾತ್ । ಗವ್ಯೇ ತು ತ್ರಿರಾತ್ರಮುಪವಾಸಃ । ಯಾವತ್ತನ್ನವ್ರಜತ್ಯಧಃ ।ಇತ್ಯನೇನ ನಿಷ್ಪುರೀಷಭಾವ ಉಕ್ತಃ । ಸ ಚ ಸಪ್ತರಾತ್ರೇಣ ಭವತಿ ।

**ಆಪಸ್ತಂಭಃ:-** ಅಭೋಜ್ಯಂ ಭುಕ್ತ್ವಾ ನೈಷ್ಪುರೀಷಂ । ತತ್ಸಪ್ತರಾತ್ರೇಣ ಭವತಿ ।
[ಅವಾಪ್ಯತೇ ಇತಿ ವಾ]

**ಗೌತಮಃ :-** ಅಭೋಜ್ಯಭೋಜನೇ ನಿಷ್ಪುರೀಷಭಾವಃ । ತ್ರಿರಾತ್ರಮಭೋಜನಮ್ ।
ಸಪ್ತರಾತ್ರಂ ವಾ ಇತಿ ।

**ವಿಜ್ಞಾನೇಶ್ವರಃ :-** ನ ಚಾಸಕುಲ್ಯೇ ಭೋಕ್ತವ್ಯಂ ಸಕುಲ್ಯಾನಾಂ ನ ದೋಷಕೃತ್ । ಸಕುಲ್ಯೇ ತು ಕುಲಸ್ಯಾನ್ನಂ ನ ದೂಷ್ಯಂ [ನ ದೋಷೋ] ಮನುರಬ್ರವೀತ್ ॥

(**ಚಾಂದ್ರಾಯಣ ಕೃಚ್ಛ್ರ**= ಚಂದ್ರನ ವೃದ್ಧಿ ಕ್ಷಯಗಳನ್ನನುಸರಿಸಿ, ಶುಕ್ಲ ಮತ್ತು ಕೃಷ್ಣ ಪಕ್ಷಗಳಲ್ಲಿ ಆಚರಿಸುವ ಒಂದು ವ್ರತ. ಮಯೂರಾಂಡಪ್ರಮಾಣದ ಗ್ರಾಸವನ್ನು [ನವಿಲಿನ ಮೊಟ್ಟೆಗಾತ್ರದ ತುತ್ತನ್ನು] ಪ್ರತಿದಿನವೂ ಹುಣ್ಣಿಮೆಯವರೆಗೆ ಒಂದೊಂದಾಗಿ ಹೆಚ್ಚಿಸುತ್ತ, ಕೃಷ್ಣಪಕ್ಷದಲ್ಲಿ ಆಮಾವಾಸ್ಯೆಯವರೆಗೂ ಪ್ರತಿದಿನವೂ ಆಹಾರದಲ್ಲಿ ಒಂದೊಂದು ಗ್ರಾಸವನ್ನು ಶೂನ್ಯವಾಗುವವರೆಗೂ ಕಡಿಮೆಮಾಡುತ್ತ ಆಚರಿಸುವ ವ್ರತ.)

**ಪ್ರಾಜಾಪತ್ಯ ಕೃಚ್ಛ್ರ**= ೧೨ ದಿನಗಳಲ್ಲಿ ಮಾಡಬಹುದಾದ ಒಂದು ಪ್ರಾಯಶ್ಚಿತ್ತ ವ್ರತ. ಮೂರು ದಿನ ಬೆಳಿಗ್ಗೆ ಮಾತ್ರ ಆಹಾರವನ್ನು ಸೇವಿಸುವುದು, ಮತ್ತೆ ಮೂರು ದಿನ ಸೂರ್ಯಾಸ್ತಕ್ಕೆ ಸರಿಯಾಗಿ ಆಹಾರ ಸೇವಿಸುವುದು. ಮತ್ತೆ ಮೂರು ದಿನ ಅಯಾಚಿತವಾಗಿ ಪ್ರಾಪ್ತವಾದ ಆಹಾರವನ್ನು ಮಾತ್ರ ಸೇವಿಸುವುದು. ಮತ್ತೆ ಮೂರು ದಿನ ಕಡ್ಡಾಯವಾಗಿ ಆಹಾರವನ್ನು ಬಿಡುವುದು. ಅಲ್ಲದೇ ಪ್ರತಿದಿನ ಎರಡುನೂರು ಪ್ರಾಣಾಯಾಮ ಹಾಗೂ ಒಂದು ಸಾವಿರ ಗಾಯತ್ರೀ ಜಪವನ್ನೂ ಆಚರಿಸುವುದು. ಇದನ್ನು ಪ್ರಾಜಾಪತ್ಯ ಕೃಚ್ಛ್ರವೆನ್ನುತ್ತಾರೆ.

**ಸಾಂತಪನ ಕೃಚ್ಛ್ರ**= ಬಹಳ ಕಷ್ಟವಾದ ಒಂದು ವ್ರತ. ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ, ಮತ್ತು ಕುಶೋದಕ ಇವೆಲ್ಲವನ್ನು ಒಂದು ದಿನ ಆಹಾರವಾಗಿ ತೆಗೆದುಕೊಂಡು, ಮರುದಿನ ಉಪವಾಸವಿರಬೇಕು. [ಮನುಸ್ಮೃತಿ] ಮೇಲೆ ಹೇಳಿದ ಆರನ್ನೂ ಸೇರಿಸಿ, ಸೇವಿಸಬೇಕೆಂದು ಹೇಳದಿರುವುದರಿಂದ

ಒಂದೊಂದನ್ನು ಒಂದೊಂದು ದಿನದಂತೆ ಆರು ದಿನಗಳು ಸೇವಿಸಿ, ಏಳನೆಯ ದಿನದಂದು ಉಪವಾಸವಿರಬೇಕೆಂಬ ಇನ್ನೊಂದು ಪಕ್ಷವೂ ಇದೆ. ಎರಡೂ ಸ್ಮೃತ್ಯುಕ್ತವಾದ್ದರಿಂದ ಸರಿಯಾದ ಪಕ್ಷಗಳೇ ಆಗಿವೆ. [ಮೇಧಾತಿಥಿ ಭಾಷ್ಯ] )

## ೮. ಗೃಹಾಶೌಚವಿಚಾರ

ಯಾರ ಮನೆಯೋ, ಅವರದೇ ಸಪಿಂಡರ ಮರಣವಾದರೆ ಹತ್ತು ರಾತ್ರಿಗಳು, ಅಂದರೆ ಮನೆಯ ಯಜಮಾನನಿಗೆ ಅಶೌಚವಿರುವಷ್ಟು ದಿನಗಳು ಗೃಹಾಶೌಚವಿರುತ್ತದೆ. ಅದೇ ಮನೆಯಲ್ಲಿ [ಸಪಿಂಡರಲ್ಲದ] ಬೇರೆಯವರು ಮರಣಹೊಂದಿದರೆ ಮನೆಯಲ್ಲಿ ಶವವಿರುವವರೆಗೆ ಮಾತ್ರ ಗೃಹಾಶೌಚವಿರುತ್ತದೆ.

ತಂದೆಯ ಮನೆಯಲ್ಲಿ ಮಗಳು ಹಡೆದರೆ ತಂದೆಗೆ ಅಶೌಚವಿರುವಷ್ಟು ದಿನಗಳು ಗೃಹಾಶೌಚವು ಇರುತ್ತದೆ; ಮಗಳಿಗೆ ಅಶೌಚವಿರುವಷ್ಟು ದಿನಗಳೆಂದು ತಿಳಿಯಬಾರದು. ತಂದೆಯ ಮನೆಯಲ್ಲಿ ಮಗಳು ಹಡೆದಾಗ ತಂದೆಗೆ ಮೂರು ರಾತ್ರಿಯ ನಂತರ ಶುದ್ಧಿಯಾಗುವುದರಿಂದ ಅವನಿಗೆ ಹವ್ಯ-ಕವ್ಯಗಳಲ್ಲಿ ಅಧಿಕಾರವು ಪ್ರಾಪ್ತವಾಗುತ್ತದೆ. ಆದ್ದರಿಂದ ಆ ಗೃಹದಲ್ಲಿಯೇ ಪಂಚಗವ್ಯದಿಂದ ಶುದ್ಧಿಯನ್ನು ಮಾಡಿಕೊಂಡು, ಶ್ರಾದ್ಧಾದಿಕರ್ಮಗಳನ್ನು ಮಾಡಬಹುದು.

ಮರಣಾಶೌಚದಲ್ಲಿ ಯಾವ ಮನೆಯಲ್ಲಿ ಉದಕ-ಪಿಂಡಾದಿಗಳನ್ನು ನಡೆಸುವರೋ, ಆ ಮನೆಗೆ ಹತ್ತು ರಾತ್ರಿಗಳು ಗೃಹಾಶೌಚವೆಂದು ಹೇಳಿರುವರು.

---

**ಶತಶ್ಲೋಕೀ :-** ದಹನಾಂತಂ ಗೃಹಾಶೌಚಂ ಯತ್ರ ಪಿಂಡೋದಕಕ್ರಿಯಾ ।
ದಶರಾತ್ರಮಿತಿ ಜ್ಞೇಯಂ ಪ್ರೇತಸ್ತತ್ರೈವ ತಿಷ್ಠತಿ ॥

**ಶತಶ್ಲೋಕೀವ್ಯಾಖ್ಯಾನೇ :-** ನ ತಾವಚ್ಛುದ್ಧ್ಯತೇ ಭೂಮಿಃ ಯಾವತ್ತುಸ್ಯಾದನಿರ್ದಶಮ್ । ನ ತತ್ರ ಕರ್ಮ ಕುರ್ವೀತ ಪೈತ್ರ್ಯಂ ದೈವಾದಿಕಂ ಕ್ವಚಿತ್ ॥ ಇತ್ಯಾದಿಕಂ ಸ್ವಾಮ್ಯಾಽಽಶೌಚಸದ್ಭಾವವಿಷಯಮ್ । ನ ತು ಮೃತಿಮಾತ್ರವಿಷಯಮ್ । ತತ್ಸಂಬಂಧಾದೇವ ಗೃಹಾದೇಃ ದುಷ್ಟತ್ವಾತ್ ।

**ಸಂಗ್ರಹೇ :-** ದ್ರವ್ಯಾಣಿ ಸ್ವಾಮಿಸಂಬಂಧಾತ್ ತದಘೇ ತ್ವಶುಚೀನಿ ವೈ ।
ಸ್ವಾಮಿಶುದ್ಧ್ಯೈವ ಶುಧ್ಯಂತಿ ವಾರಿಣಾ ಪ್ರೋಕ್ಷಿತಾನ್ಯಪಿ ॥
ಇತಿ ಸ್ವಾಮಿಶುದ್ಧ್ಯಾ ದ್ರವ್ಯಸ್ಯಾಪಿ ಶುದ್ಧ್ಯಭಿಧಾನಾತ್ ।

## ೯. ಊರಿನಲ್ಲಿ ಶವಸ್ಥಿತಿ ವಿಚಾರ

ಒಂದು ಗ್ರಾಮದಲ್ಲಿ ಯಾರಾದರೂ ಮೃತಪಟ್ಟರೆ ಶವವಿರುವಷ್ಟು ಸಮಯ ಆ ಗ್ರಾಮದಲ್ಲಿ ಯಾವುದೇ ಧರ್ಮ-ಕರ್ಮಗಳನ್ನು ಮಾಡಬಾರದು. ಹಳ್ಳ-ಹೊಳೆ-ಪರ್ವತ-ಗುಡ್ಡಗಾಡುಗಳಿಂದ ಮೃತಪಟ್ಟ ಸ್ಥಳವು ಬೇರ್ಪಟ್ಟಿದ್ದರೆ ಅಥವಾ

ವೀಥ್ಯಂತರವಾದರೆ [ಬೇರೆ-ಬೇರೆ ಬೀದಿಯವರಾಗಿದ್ದರೆ] ಅಥವಾ ಚತುಷ್ಪಥಗಳ ಆಚೆಯಾದರೆ ಅಥವಾ ಹನ್ನೊಂದು ಧನುಃಪ್ರಮಾಣದ [ಬಿಲ್ಲಿನಳತೆ] ಹೊರಗಾದರೆ ನಿತ್ಯ-ನೈಮಿತ್ತಿಕ-ಕಾಮ್ಯಕರ್ಮಗಳಿಗೆ ದೋಷವಿಲ್ಲವೆಂದು ಹೇಳಿದೆ.

ದೇವರ ಪೂಜೆಯನ್ನು ಪ್ರಾರಂಭಿಸಿದ್ದರೆ ಮಂತ್ರವನ್ನುಚ್ಚರಿಸದೇ ಕೇವಲ ತಂತ್ರದಿಂದ ಪ್ರಾರಂಭಿಸಿದ ಪೂಜೆಯನ್ನು ಮುಗಿಸಬೇಕು.

ಅಷ್ಟಬಂಧ, ಉತ್ಸವ, ದೇವಪ್ರತಿಷ್ಠಾ, ರುದ್ರಹೋಮ, ಚಂಡೀಹೋಮ ಮೊದಲಾದ ಮಹಾಕಾರ್ಯಗಳಲ್ಲಿ ಆದಷ್ಟು ಶೀಘ್ರವಾಗಿ ಶವದಹನಕಾರ್ಯವನ್ನು ಮುಗಿಸಿ, ಅವಶಿಷ್ಟವಾದ ಮುಂದಿನ ಕಾರ್ಯಗಳನ್ನು ಮಾಡಬೇಕು.

ಶೂದ್ರ, ಚಾಂಡಾಲ ಮತ್ತು ಮ್ಲೇಚ್ಛರ ಶವವಾದರೆ ಗ್ರಾಮಾಶೌಚವು ಇರುವುದಿಲ್ಲ. [ಸ್ಪಷ್ಟವಚನಗಳಿವೆ-ನೋಡಿ ಟಿಪ್ಪಣಿ] ಇವರು ಇರುವ ಗ್ರಾಮದಲ್ಲಿ ಅಧ್ಯಯನ, ಹೋಮ, ಭೋಜನಾದಿಗಳನ್ನು ಮಾಡಬಾರದು.

ಅನಾಥರ, ಬಾಲಕರ, ಮುನಿವೃತ್ತಿಯವರ ಮತ್ತು ಸಂನ್ಯಾಸಿಗಳ ಮರಣದಲ್ಲಿ ಗ್ರಾಮಾಶೌಚವಿಲ್ಲ. ಪಟ್ಟಣ ಮತ್ತು ಮಹಾನಗರ [ಹತ್ತು ಸಾವಿರಕ್ಕಿಂತ ಹೆಚ್ಚು ಜನರ ವಸತಿ ಇದ್ದರೆ ಅದು ಮಹಾನಗರ] ಹಾಗೂ ಪುಣ್ಯಕ್ಷೇತ್ರಗಳಲ್ಲಿ ಗ್ರಾಮಾಶೌಚವನ್ನು ಬಳಸಬೇಕಾಗಿಲ್ಲ.

---

**ಸ್ಮೃತ್ಯಂತರೇ :-** ಅಂತಃ ಶಾವೋ ಯದಾ ಗ್ರಾಮಃ ತಸ್ಮಿನ್ ಗ್ರಾಮೇ ತದಾಲಯೇ।
ನಿತ್ಯಂ ನೈಮಿತ್ತಿಕಂ ಕಾಮ್ಯಂ ನ ಕುರ್ಯಾದಿತಿ ಶಾಸನಮ್ ॥

**ಮನುಃ :-** ನಾದ್ಯಾದಂತಃ ಶಾವೇ ಗ್ರಾಮೇ ನಾಧೀಯಾನ್ನ ಜುಹೋತಿ ಚ ।
ತಾನಿ ವೀಥ್ಯಂತರೇ ಕುರ್ಯಾತ್ ಧನುರೇಕಾದಶಾಂತರೇ ॥

**ಅನ್ಯತ್ರ :-** ಗ್ರಾಮಮಧ್ಯಗತೋ ಯಾವತ್ ಶವಸ್ತಿಷ್ಠತಿ ಕಸ್ಯಚಿತ್ ।
ಗ್ರಾಮಸ್ಯ ತಾವದಾಶೌಚಂ ನಿರ್ಗತೇ ಶುಚಿತಾಮಿಯಾತ್॥

**ಸ್ಮೃತ್ಯರ್ಥಸಾರೇ :-** ಧನುಃಪ್ರಮಾಣಂ ಯೋಜನಪ್ರಮಾಣಂ ಚ ಉಕ್ತಂ-
ವಿತಸ್ತಿಃ ದ್ವಿಗುಣಾಽಽರತ್ನಿಃ ತತಃ ಕಿಷ್ಕುಃ ತತೋ ಧನುಃ ।
ಧನುಃ ಸಹಸ್ರೇ ದ್ವೇ ಕ್ರೋಶಂ ಚತುಷ್ಕ್ರೋಶಂ ತು ಯೋಜನಂ ॥
ಇತ್ಯುಕ್ತಲಕ್ಷಣೇಭ್ಯಃ ಏಕಾದಶಭ್ಯೋ ಧನುರ್ಭ್ಯಃ ಪರಸ್ಯಾಂ ಪೃಥಗ್ವೀಥ್ಯಾಂ ವಾ [ಸರ್ವದಾ] ಕುರ್ಯಾತ್ ॥

**ಅತ್ರ ವಿಶೇಷಃ-** ಯಸ್ಮಿನ್ ಗ್ರಾಮೇ ಬ್ರಾಹ್ಮಣಾಃ ಸಂತಿ ತಸ್ಮಿನ್ ಚತುಃಸಹಸ್ರಯುಕ್ತೇ ಗ್ರಾಮೇ, ಏಕಾದಶಧನುರ್ವ್ಯವಹಿತತ್ವಾಭಾವೇಽಪಿ ವೀಥ್ಯಂತರೇ, ಚತುಷ್ಪಥವ್ಯವಧಾನೇ ವಾ ನಾರಾಚವಿಚ್ಛೇದೇ ವಾ ಕ್ರಿಯಾಃ ಹೋಮಾದಿ ಕರ್ಮಾಣಿ ಕುರ್ಯಾತ್ ।

**ಸ್ಮೃತ್ಯಂತರೇ :–** ಅಂತಃ ಶವಂ ಯದಿ ಭವೇತ್ ತತೋ ನೀತ್ವಾ ತಥಾ ಬಹಿಃ ।
ತಚ್ಛವಂ ಭಸ್ಮಸಾದ್ಯಾವತ್ ತಾವತ್ತಂತ್ರೇಣ ಪೂಜಯೇತ್ ॥
ಮಂತ್ರೇಣ ನ ಪೂಜಯೇದಿತ್ಯರ್ಥಃ ।
ಪ್ರತಿಷ್ಠಾದಿಷು ಕಾಲೇಷು ಯಸ್ಮಿನ್ ಕಾಲೇ ಮೃತಿರ್ಭವೇತ್ ।
ಶೀಘ್ರಂ ಬಹಿಃ ಶವಂ ನೀತ್ವಾ ಕರ್ಮಶೇಷಂ ಸಮಾಪಯೇತ್ ॥
[ಬಹಿಃಶವಮಿತಿ ದಾಹಕ್ರಿಯಾಂ ಇತ್ಯರ್ಥಃ]

**ಸ್ಮೃತ್ಯಂತರೇ :–** ಶೂದ್ರಾಣಾಂ ಮರಣಂ ಸ್ಯಾಚ್ಚೇತ್ ಗ್ರಾಮಮಧ್ಯೇ ಕಥಂಚನ ।
ಅಶೌಚಂ ಗೃಹಮಾತ್ರಸ್ಯ ಗ್ರಾಮಾಶೌಚಂ ನ ವಿದ್ಯತೇ ॥
ಗ್ರಾಮಸ್ಥೇ ಶವಚಾಂಡಾಲೇ ಶೂದ್ರೇಽಪ್ಯಶುಚಿಸನ್ನಿಧೌ ।
ನಾಧ್ಯೇತವ್ಯಂ ನ ಹೋತವ್ಯಂ ನ ಭೋಕ್ತವ್ಯಂ ಕದಾಚನ ॥
ಶೂದ್ರೇ ಸನ್ನಿಹಿತೇ ಇತಿ ಅಥವಾ ಶೂದ್ರಾದ್ಯಶುಚಿಸನ್ನಿಧಾವಿತಿ ವಾ ।
ಕುಟಿಕೇ ಪತ್ತನೇ ಚೈವ ಖರ್ವಟೇ ರಾಜಧಾನಿಷು ।
ಪುಣ್ಯಕ್ಷೇತ್ರೇಽರ್ಚನಂ ಕುರ್ಯಾದುಕ್ತದೋಷೋ ನ ವಿದ್ಯತೇ ॥

## ೧೦. ಸಪಿಂಡರು ಯಾರು? ಎಂಬ ವಿಚಾರ.

ಮುಖ್ಯ ಕರ್ತೃ ಪುರುಷನಿಂದ ಹಿಂದಿನ ಆರು ಜನರು, ಪಿಂಡ ಕೊಡುವವನನ್ನೂ ಸೇರಿಸಿ ಒಟ್ಟು ಏಳು ಜನರು ಒಂದು ಸಪಿಂಡದ ಗುಂಪಿಗೆ ಸೇರುವರು. ಇವರಿಗೆ ಜ್ಞಾತಿಗಳು, ಬಂಧುಗಳೆಂದೂ ಹೇಳುವರು. ಅಪ್ಪ, ಅಜ್ಜ, ಮುತ್ತಜ್ಜ (ಪಿತೃ, ಪಿತಾಮಹ, ಪ್ರಪಿತಾಮಹ) ಈ ಮೂವರು ಪಿಂಡಭಾಗಿಗಳು. ಮುತ್ತಜ್ಜನ ಅಪ್ಪ, ಅಜ್ಜ, ಮುತ್ತಜ್ಜ ಈ ಮೂವರು ಲೇಪ ಭಾಗಿಗಳು. ಈ ಆರು ಜನರು ಮತ್ತು ಪಿಂಡ ಕೊಡುವವನನ್ನೂ ಸೇರಿಸಿ ಒಟ್ಟಾರೆ ಈ ಏಳು ಜನರು ಒಂದು ಸಪಿಂಡರಾಗುವರು.

ಕೆಲವು ಗ್ರಂಥಗಳಲ್ಲಿ ಕವಲು ಬೇರೆಯಾಗುವ ಪುರುಷನಿಂದ ಪ್ರಾರಂಭಿಸಿ, ಕೆಳಗಡೆ ಏಳು ತಲೆಯವರೆಗಿನ ಪುರುಷರು ಒಂದು ಸಪಿಂಡವೆಂದು ಪರಿಗಣಿಸಿದೆ. ಮೇಲಿನಿಂದ ಕೆಳಗೆ ಬಂದರೂ ಅಥವಾ ಕೆಳಗಿನಿಂದ ಮೇಲೆ ಹೋದರೂ ಒಂದೇ ಅರ್ಥವಾಗುವುದು. ಪಿಂಡವೆಂದರೆ ಶರೀರವಾಗಿದೆ. ಪಿತೃ ಮೊದಲಾದವರಿಂದ ಏಕಶರೀರ ಅವಯವ ಅನ್ವಯತ್ವವು ಸಾಕ್ಷಾತ್ ಮತ್ತು ಪರಂಪರೆಯಿಂದ ಸರಪಳಿಯಂತೆ ಹರಿದು ಬಂದಿರುತ್ತದೆ. ಈ ಶರೀರಾವಯವ ಸಂಬಂಧವು ದೂರ ಸರಿದಂತೆ ಆಶೌಚವು ಕಡಿಮೆಯಾಗುತ್ತ ಹೋಗುತ್ತದೆ. ಅವಯವವೆಂದರೆ ಅಂತರವಯವ, ಬಹಿರವಯವ. (ಸಪ್ತಧಾತುಗಳು ಮನೋ, ಬುದ್ಧಿ, ಅಹಂಕಾರ, ಚಿತ್ತ, ರೇತಸ್ಸು, ಶೋಣಿತಗಳು ಅಂತರವಯವಗಳು. ಕಣ್ಣು, ಕಿವಿ, ಮೂಗು, ಬಾಯಿ, ಕೈ ಕಾಲುಗಳು ಬಹಿರವಯವಗಳು) ಈ ಕಲಿಯುಗದಲ್ಲಿ ಕ್ರಮಾಶೌಚವನ್ನು

ನಿಷೇಧಿಸಿರುವುದರಿಂದ ಸಪ್ತ ಸಪ್ತ ಪುರುಷರ ಅವಧಿಯಂತೆ ಮೂರು ಸಪ್ತಕ (ಇಪ್ಪತ್ತೊಂದು ತಲೆಗಳಿದ ನಂತರ) ಸಗೋತ್ರದವರೆಂದೂ, ಅವರಿಗೆ ಸ್ನಾನ ಮಾತ್ರ ಆಶೌಚವೆಂದೂ ಪರಿಗಣಿಸಿರುವುದು ತಿಳಿದುಬರುತ್ತದೆ.

ಕೆಲವರು ಅಪ್ಪ, ಅಜ್ಜ, ಮುತ್ತಜ್ಜ ಹಾಗೆಯೇ ಮಗ, ಮೊಮ್ಮಗ, ಮಿಮ್ಮಗ, ಪಿಂಡ ಕೊಡುವವನನ್ನೂ ಸೇರಿಸಿ ಈ ಏಳೂ ಜನರು ಒಂದು ಸಪಿಂಡದವರೆಂದು ಹೇಳಿರುವರು. ಈ ಗಣನೆಯನ್ನು ಮಧ್ಯಮಣಿ ನ್ಯಾಯದಂತೆ ಪಿಂಡ ಕೊಡುವ ಪುರುಷನ ಪ್ರಪಿತಾಮಹ ಅಂದರೆ ಕೊನೆಯ ಪಿಂಡಭಾಗಿಯಿಂದ ಲೆಕ್ಕ ಮಾಡಿದರೆ ಸರಿಯಾಗಿಯೇ ಕೂಡುತ್ತದೆ ಎಂದು ತಿಳಿಯಬೇಕು. ಪ್ರಪಿತಾಮಹನು ಒಮ್ಮೆ ಬದುಕಿದ್ದರೆ ಅವನು ಕೊಡುವ ಪಿಂಡವನ್ನು ಮಿಮ್ಮಗನು ಕೊಡಬಹುದೆಂದು ಶಾಸ್ತ್ರವಿರುವುದರಿಂದ ಪ್ರಪಿತಾಮಹನ ಅಪ್ಪ, ಅಜ್ಜ, ಮುತ್ತಜ್ಜನವರೆಗೂ ಹಿಡಿದುಕೊಂಡು ಎಣಿಸಿದರೆ ಈ ಮೇಲೆ ಹೇಳಿದ ಸಪಿಂಡರ ಗುಂಪೇ ಸಿದ್ಧವಾಗುವುದು ಎಂದು ವಿಜ್ಞಾನೇಶ್ವರ, ವಿಶ್ವಾದರ್ಶ, ಸ್ಮೃತಿಸಾರಸರ್ವಸ್ವ ಮೊದಲಾದ ಗ್ರಂಥಗಳಲ್ಲಿ ಸೂಚಿಸಿರುವರು. ಅದರಿಂದಲೇ ಪಿಂಡ ಕೊಡುವವನನ್ನು ಸೇರಿಸಿಕೊಳ್ಳಬೇಕು. ಈ ಪಿಂಡ ಕೊಡುವ ಮಿಮ್ಮಗನ ತಲೆಗಳೆದ ಕೂಡಲೆ ಆ ಪ್ರಪಿತಾಮಹನು ಲೇಪಭಾಜರ ಪಂಕ್ತಿಯನ್ನು ಸೇರುತ್ತಾನೆ. ಕೊನೆಯ ಲೇಪಭಾಜನು ನಾಂದಿ ಪಿತೃವರ್ಗವನ್ನು ಸೇರುತ್ತಾನೆ. ಹೀಗೆಯೇ ಒಂದೊಂದು ತಲೆಯು ಮೇಲೆ ಏರುತ್ತ ಇಪ್ಪತ್ತೊಂದನೆಯವನು ಶಾಶ್ವತ ಪುಣ್ಯಲೋಕವನ್ನು ಪಡೆಯುವನು. ಅದರಿಂದಲೇ ಇಪ್ಪತ್ತೊಂದು ಪಿತೃ ಪುರುಷ ಪಂಕ್ತಿಯು ಪವಿತ್ರವಾಗುವುದು ಎಂದು ಶ್ರುತಿ ಸ್ಮೃತಿಗಳಲ್ಲಿ ಹೇಳಿದೆ.

ಅಪ್ಪ, ಅಜ್ಜ, ಮುತ್ತಜ್ಜ, ಮಗ, ಮೊಮ್ಮಗ, ಮಿಮ್ಮಗ ಈ ಆರು ಜನರಿಗೆ ಪಿಂಡ ಕೊಡುವ ಅಧಿಕಾರವಿರುವುದರಿಂದ, ಪಿಂಡ ಕೊಡುವವನನ್ನೂ ಸೇರಿಸಿ, ಈ ಏಳು ಜನರ ಗುಂಪನ್ನು ಸಪಿಂಡದವರೆಂದು ಹೇಳಿರುವರು. ಈ ಸಪಿಂಡದವರನ್ನು ದಾಯಭಾಗಕ್ಕೂ ಹಾಗೆಯೇ ಗುರುಲಘು ಆಶೌಚ ಗಣನೆಯಲ್ಲಿಯೂ ಉಪಯೋಗಿಸಿರುವುದು ಕಂಡುಬರುತ್ತದೆ; ಅಥವಾ ಎರಡು ಪಕ್ಷವನ್ನು ಕಲ್ಪಿಸಿಕೊಂಡರೆ ಪಿಂಡ ಕೊಡುವವನನ್ನೂ ಸೇರಿ ಹಿಂದಿನ ಏಳು ತಲೆವರೆಗಿನ ಸಪ್ತಪುರುಷ ಸಪಿಂಡಪಕ್ಷವೇ ಹೆಚ್ಚು ಪ್ರಶಸ್ತವೆಂದೂ, ಕಲಿಯುಗದಲ್ಲಿ ಈ ಪಕ್ಷವನ್ನೇ ಆಶ್ರಯಿಸಬೇಕೆಂದೂ, ಇದುವೇ ಬಹುಸಮ್ಮತವೆಂದೂ ನಿರ್ಣಯಿಸಿರುವುದು ಕಂಡುಬರುತ್ತದೆ.

ಎಂಟನೇ ತಲೆಯಿಂದ ಹದಿನಾಲ್ಕನೇ ತಲೆವರೆಗಿನ ಏಳು ಜನರು ಸಕುಲ್ಯರು ಅಥವಾ ಸೋದಕರೆಂದೂ ಹೇಳುವರು. ಹದಿನೈದನೇ ತಲೆಯಿಂದ ಇಪ್ಪತ್ತೊಂದನೇ ತಲೆವರೆಗಿನ ಏಳು ಜನರು ಏಕಾಹಿಗಳು (ಒಂದು ದಿನ ಆಶೌಚ

ಬಳಸುವವರು) ಎಂದು ಹೇಳುವರು. ಇಪ್ಪತ್ತೊಂದರ ನಂತರ ಸಗೋತ್ರದವರೆಂದು ನಿರ್ಣಯಿಸಿದೆ. ಕೂಟಸ್ಥ ಪುರುಷನೆಂದರೆ ಸಂತತಿಯನ್ನು (ವಂಶವನ್ನು) ವಿಭಾಗಿಸುವ ಮುಖ್ಯ ಪುರುಷನೆಂದು ತಿಳಿಯಬೇಕು.

---

**ಅಗ್ನಿ ಪುರಾಣೇ:**– ಸರ್ವೇಷಾಮೇವ ವರ್ಣಾನಾಂ ವಿಜ್ಞೇಯಾ ಸಾಪ್ತಪೂರುಷೀ ।
ಸಪಿಂಡತಾ ತತಃ ಪಶ್ಚಾತ್ ಸಮಾನೋದಕ ಧರ್ಮತಾ ॥

**ತತ್ರೈವ** :– ಸಪಿಂಡತಾ ತು ಪುರುಷೇ ಸಪ್ತಮೇ ವಿನಿವರ್ತತೇ ।
ಸಮಾನೋದಕಭಾವಸ್ತು ನಿವರ್ತೇತಾಽಚತುರ್ದಶಾತ್ ॥

**ಮನುಃ:**– ಸಪಿಂಡತಾ ತು ಪುರುಷೇ ಸಪ್ತಮೇ ವಿನಿವರ್ತತೇ ।

**ಬೋಧಾಯನಃ:**– ಸಪಿಂಡತಾ ತ್ವಾಸಪ್ತಮಾತ್ ಇತಿ

**ವ್ಯಾಸಃ:**– ಸಮಾನೋದಕಭಾವಸ್ತ್ವನುವರ್ತೇತಾಽಚತುರ್ದಶಾತ್ ।
ಜನ್ಮ ನಾಮ್ನೋಃ ಸ್ಮೃತೇರೇಕೇ ತತ್ಪರಂ ಗೋತ್ರಮುಚ್ಯತೇ ।

**ಸ್ಮೃತಿಸಾರ ಸಮುಚ್ಚಯೇ:**– ಯತ ಆರಭ್ಯ ವಂಶಸ್ಯ ಪುತ್ರಭಾವೇ ವಿಭಾಗತಾ ।
ಸಕೂಟಸ್ಥಃ ಪರಿಜ್ಞೇಯಃ ಪುರುಷಸ್ತ್ರಿತಯಾವಧಿ ॥

**ಬೋಧಾಯನಃ:**– ಏಕವಿಂಶತಿ ಪುರುಷಪಂಕ್ತಿಂ ಪುನಾತಿ ಇತಿ ।

## ೧೧. ಕನ್ಯಾ ಸಾಪಿಂಡ್ಯ ವಿಚಾರ

ಕನ್ಯಾ (ಸ್ತ್ರೀಯರ) ವಿಷಯದಲ್ಲಿ ತ್ರಿಪೂರುಷಸಾಪಿಂಡ್ಯವನ್ನು ಅಶೌಚಕ್ಕೆ ಸಂಬಂಧಪಟ್ಟಂತೆ ಪಿತೃಪಕ್ಷದವರು ಸ್ವೀಕರಿಸಬೇಕು. "ಪಂಚಮಪರ್ಯಂತಂ" ಎಂಬ ಯಾಜ್ಞವಲ್ಕ್ಯವಚನವು ವಿವಾಹ ನಿಷೇಧಕ್ಕೆ ಸಂಬಂಧಿಸಿದುದು. ಅಶೌಚವಿಷಯದಲ್ಲಿ ತ್ರಿಪುರುಷಸಾಪಿಂಡ್ಯವನ್ನೇ ಪರಿಗ್ರಹಿಸಬೇಕು.

[ಸಾಪಿಂಡ್ಯನಿರ್ಣಯದ ಹೆಚ್ಚಿನ ಚರ್ಚೆಯನ್ನು ಶತಶ್ಲೋಕಿಯ ಸ್ಮೃತಿಸಾರಸರ್ವಸ್ವವೆಂಬ ವ್ಯಾಖ್ಯಾನದಿಂದಲೂ, ವಿಜ್ಞಾನೇಶ್ವರ ಮೊದಲಾದ ಗ್ರಂಥದಿಂದಲೂ ಅರಿತುಕೊಳ್ಳಬೇಕು. ಗ್ರಂಥವಿಸ್ತಾರಭಯದಿಂದ ಅಶೌಚವಿಚಾರಕ್ಕೆ ಸಂಬಂಧಪಟ್ಟುದನ್ನು ಮಾತ್ರ ಇಲ್ಲಿ ಹೇಳಿದೆ.]

---

**ಶತಶ್ಲೋಕೀ** :– ಆತ್ರಿಪುರುಷಮೇವಾಘಂ ಕನ್ಯಾಯಾಃ ಮೃತಿಜನ್ಮನೋಃ ।
ಆಸಪ್ತಮಾತ್ ಪುಂಸಃ ಸಾಪಿಂಡ್ಯಂ ಚ ತಥಾ ದ್ವಯೋಃ ॥

**ಸ್ಮೃತಿಸಾರಸರ್ವಸ್ವವ್ಯಾಖ್ಯಾನ** :–ಸ್ತ್ರೀಷು ಸಾಪಿಂಡ್ಯಂ ತ್ರಿಪೂರುಷಮೇವ ।
ಅಪ್ರತ್ತಾಸು ಸ್ತ್ರೀಷು ಜನ್ಮ–ಮರಣೇ ತ್ರಿಪೂರುಷಮೇವ ಆಶೌಚಮ್ ॥

**ಶಂಖಃ :-** ಸಪಿಂಡತಾ ವಿನಿರ್ದಿಷ್ಟಾ ಪಿತೃಪಕ್ಷೇ ತ್ರಿಪೂರುಷೀ ॥

**ವಸಿಷ್ಠಃ :-** ಅಪ್ರತ್ತಾನಾಂ ತು ಸ್ತ್ರೀಣಾಂ ಸಾಪಿಂಡ್ಯಂ ತ್ರಿಪೂರುಷಮಿತಿ ವಿಜ್ಞಾಯತೇ ।

## ೧೨. ಸಪಿಂಡಾದಿಗಳ ಆಶೌಚ ವಿಚಾರ

ಜನನ-ಮರಣಾಶೌಚವನ್ನು ಸಪಿಂಡರು [ಏಳು ತಲೆಮಾರಿನವರೆಗಿನವರು] ಹತ್ತು ರಾತ್ರಿಗಳನ್ನು ಬಳಸಬೇಕು. ಸಕುಲ್ಯರು [ಎಂಟರಿಂದ ಹದಿನಾಲ್ಕನೆಯ ತಲೆಮಾರಿನವರು] ಮೂರು ರಾತ್ರಿಗಳನ್ನು ಬಳಸಬೇಕು. ಏಕಾಹಿಗಳು ಅಥವಾ ಗೋತ್ರಜರು [ಹದಿನೈದರಿಂದ ಇಪ್ಪತ್ತೊಂದನೇ ತಲೆಮಾರಿನವರೆಗಿನವರು] ಒಂದು ದಿನದ ಅಶೌಚವನ್ನು ಬಳಸಬೇಕು. ಸಗೋತ್ರದವರು ಸ್ನಾನವನ್ನು ಮಾಡುವವರೆಗೆ ಆಶೌಚವನ್ನು ಹೊಂದಿರುತ್ತಾರೆ.

"ಸ್ನಾತ್ವಾ ಶುದ್ಧ್ಯಂತಿ ಗೋತ್ರಜಾಃ" [ಗೋತ್ರಜರು ಸ್ನಾನದಿಂದ ಶುದ್ಧರಾಗುತ್ತಾರೆ] ಮತ್ತು "ಗೋತ್ರಜಾನಾಂ ಅಹಃ ಸ್ಮೃತಮ್" [ಗೋತ್ರಜರಿಗೆ ಒಂದು ದಿನದ ಆಶೌಚ] ಎಂಬ ಎರಡು ಸ್ಮೃತಿವಚನಗಳಿಗೆ ಪರಸ್ಪರ ವಿರೋಧವಿದ್ದಂತೆ ತೋರುತ್ತದೆ. ಎರಡನೆಯದಾದ "ಗೋತ್ರಜಾನಾಂ ಅಹಃ ಸ್ಮೃತಮ್" ಎಂಬ ವಸಿಷ್ಠಸ್ಮೃತಿಯಲ್ಲಿ ಸಗೋತ್ರರ ಪ್ರಸ್ತಾಪವೇ ಇರುವುದಿಲ್ಲ. ಮೊದಲನೆಯ ಸ್ಮೃತಿವಚನದಲ್ಲಿರುವ "ಗೋತ್ರಜಾಃ" ಎಂಬುದಕ್ಕೆ "ಸಗೋತ್ರರು" ಎಂದು ಅರ್ಥೈಸಿಕೊಳ್ಳಬೇಕು. [ಆಗ ಎರಡು ಸ್ಮೃತಿಗಳಲ್ಲಿಯೂ ವಿರೋಧವಿರುವುದಿಲ್ಲ.] ದಾಕ್ಷಿಣಾತ್ಯರ ಪದ್ಧತಿಯೂ ಹದಿನೈದನೇ ತಲೆಮಾರಿನಿಂದ ಇಪ್ಪತ್ತೊಂದನೇ ತಲೆಯವರೆಗೆ ಒಂದು ದಿನ ಆಶೌಚವನ್ನು ಬಳಸುವುದೇ ಆಗಿದೆ. ಆದ್ದರಿಂದ ಇಪ್ಪತ್ತೊಂದು ತಲೆಮಾರಿನ ನಂತರವೇ ಸ್ನಾನದಿಂದ ಶುದ್ಧಿಯೆಂದು ತಿಳಿಯಬೇಕು. ಒಂದೇ ಕುಲ-ಗೋತ್ರ ಎಂಬ ಅರಿವಿರುವವರೆಗೂ ಸ್ನಾನಪರ್ಯಂತ ಆಶೌಚವನ್ನು ಬಳಸಬೇಕೆಂದು ಸ್ಮೃತಿಗಳು ಹೇಳಿವೆ. ಕೆಲವರು [ವ್ಯಾಸರು] ಎಷ್ಟೇ ತಲೆಗಳೆದರೂ ಜನ್ಮ-ನಾಮಸ್ಮೃತಿಯು ಸರಿಯಾಗಿ ತಿಳಿದಿರುವವರೆಗೂ ಮೂರುರಾತ್ರಿ ಅಶೌಚವನ್ನು ಬಳಸಬೇಕೆಂದು ಹೇಳಿರುವರು. ಆದರೆ ಸಮಾನಗ್ರಾಮವಾಸದಲ್ಲಿ [ಒಂದೇ ಊರಿನಲ್ಲಿ] ಹದಿನಾಲ್ಕು ತಲೆಗಳೆದರೂ ಜನ್ಮ-ನಾಮಗಳ ಸ್ಮೃತಿಯು ಸರಿಯಾಗಿಯೇ ಇರಬಹುದು, ಅಲ್ಲಿ ಮೂರುರಾತ್ರಿ ಆಶೌಚವನ್ನು ಬಳಸುವ ಆವಶ್ಯಕತೆಯಿಲ್ಲವೆಂದು ತೋರಿಸುವದಕ್ಕಾಗಿಯೇ ವ್ಯಾಸರು "ಜನ್ಮ-ನಾಮ್ನೋಃ ಸ್ಮೃತೇರೇಕೇ" ಎಂಬ ವಚನವನ್ನು ಎತ್ತಿ ಹೇಳಿರುವರೆಂದು ಅಭಿಪ್ರಾಯವಿದೆ.

ಸಪಿಂಡರು, ಸಕುಲ್ಯರು ಮತ್ತು ಏಕಾಹಿಗಳು ಅಶೌಚವನ್ನು ಬಳಸುವ ಕಾಲದಲ್ಲಿ ಪ್ರೇತನಿಗೆ ಹೆಸರನ್ನು ಉಚ್ಚರಿಸಿ, ಉದಕಾಂಜಲಿ ಪ್ರದಾನವನ್ನು ನಡೆಸಬೇಕೆಂದು ಹೇಳಿದೆ. ಜಾತಾಶೌಚದಲ್ಲಿ ಜಲಾಂಜಲಿಯ ಪ್ರಶ್ನೆಯೇ ಉದ್ಭವಿಸುವುದಿಲ್ಲ. ತಲೆಗಳೆಯ ಲೆಕ್ಕವು ನಿರ್ದಿಷ್ಟವಾಗಿ ಗೊತ್ತಿಲ್ಲದೆ "ಅವರು

ನಮ್ಮ ದಾಯಾದಿಗಳು" ಎಂದು ತಿಳಿದಿದ್ದರೆ ಅಂಥ ಸಂದರ್ಭದಲ್ಲಿ ಆ ದಾಯಾದಿಗಳ ಆಶೌಚವನ್ನು ಮೂರು ರಾತ್ರಿ ಬಳಸಬೇಕೆಂದು ಮನುವಿನ ಅಭಿಪ್ರಾಯವಾಗಿದೆ. ಜ್ಞಾತಿಗಳು ಆಶೌಚದ ಕಾಲದಲ್ಲಿ ಪ್ರೇತನಿಗೆ ಉದಕಾಂಜಲಿಯನ್ನು ಕೊಡದಿದ್ದರೆ ಆಶೌಚವು ನಿವೃತ್ತಿಯಾಗುವುದಿಲ್ಲವೆಂದು ಹೇಳಿದೆ. ಈ ವಿಷಯವನ್ನು ಮುಂದೆ ಮರಣಾಶೌಚಪ್ರಕರಣದಲ್ಲಿ ಸ್ಪಷ್ಟಪಡಿಸಲಾಗಿದೆ.

---

**ವಸಿಷ್ಠ :**–ದಶಾಹೇನ ಸಪಿಂಡಾನಾಂ ಶುದ್ಧಿಃ ಸ್ಯಾತ್ತು ತ್ರಿರಾತ್ರಿತಃ ।
ಸಮಾನೋದಕಜಾತಾನಾಂ ಗೋತ್ರಜಾನಾಂ ಅಹಃ ಸ್ಮೃತಮ್ ॥

**ವ್ಯಾಸಃ :**– ಜನ್ಮನಾಮ್ನೋಃ ಸ್ಮೃತೇರೇಕೇ ತತ್ಪರಂ ಗೋತ್ರಮುಚ್ಯತೇ ॥

**ವಸಿಷ್ಠ :**– ಸರ್ವೇ ಜ್ಞಾತಯೋಽಭ್ಯುಪಯಂತಿ ಆಸಪ್ತಮಾತ್ ಆದಶಮಾಚ್ಚ । ಸಮಾನಗ್ರಾಮವಾಸೇ ಯಾವತ್ಸಂಬಂಧಂ ಅನುಸ್ಮರೇಯುಃ, ಏಕವಸ್ತ್ರಾಃ ಪ್ರಾಚೀನಾವೀತಿನಃ ಸವ್ಯ ಅನಾಮಿಕಯಾ ಅಪನಃ ಶೋಽಶುಚದಘಂ ಇತಿ ದಕ್ಷಿಣಾಭಿಮುಖಾಃ ನಿಮಜ್ಜಂತಿ ಪ್ರೇತಾಯೋದಕಂ ಸಕೃತ್ ಪ್ರಸಿಂಚಂತ್ಯಂಜಲಿನಾ ಅಸಾವೇತತ್ತೇ ಇತಿ ।

**ಮನುಃ :**– ಸಮಾನೋದಕಭಾವಸ್ತು ಜನ್ಮನಾಮ್ನೋರವೇದನೇ ।

## ೧೩. ಗರ್ಭಸ್ರಾವ ಅಥವಾ ಗರ್ಭಪತನವಾದರೆ

ಯಾವುದೇ ಗರ್ಭಿಣೀ ಸ್ತ್ರೀಯ ಗರ್ಭವು ಮೂರನೇ ಅಥವಾ ನಾಲ್ಕನೆಯ ತಿಂಗಳಲ್ಲಿ ನಷ್ಟವಾದರೆ [ಸ್ರಾವವಾದರೆ] ಅದನ್ನು "ಗರ್ಭಸ್ರಾವ"ವೆನ್ನುತ್ತಾರೆ. ಆ ಸ್ತ್ರೀಯು [ತಾಯಿಯು] ಮೂರನೇ ತಿಂಗಳಿನಲ್ಲಾದರೆ ಮೂರು ರಾತ್ರಿಗಳನ್ನೂ, ನಾಲ್ಕನೆಯ ತಿಂಗಳಿನಲ್ಲಾದರೆ ನಾಲ್ಕು ರಾತ್ರಿಗಳನ್ನೂ ಆಶೌಚವನ್ನು ಋತುಮತಿಯಂತೆ ಬಳಸಬೇಕು. ಅವಳ ಗಂಡನಿಗೂ ಉಳಿದ ಸಪಿಂಡರಿಗೂ ಕೇವಲ ಸ್ನಾನದಿಂದ ಶುದ್ಧಿಯಾಗುವುದು.

ಐದನೆಯ ಅಥವಾ ಆರನೆಯ ತಿಂಗಳಿನಲ್ಲಿ ಗರ್ಭವು ನಷ್ಟವಾದರೆ ಅದನ್ನು "ಗರ್ಭಪಾತ"ವೆನ್ನುತ್ತಾರೆ. ಆಗ ಆ ಸ್ತ್ರೀಯು ಐದನೆಯ ತಿಂಗಳಿನಲ್ಲಾದರೆ ಐದು ದಿನ ಮತ್ತು ಆರನೆಯ ತಿಂಗಳಿನಲ್ಲಾದರೆ ಆರು ದಿನಗಳ ಆಶೌಚವನ್ನು ಋತುಮತಿಯಂತೆ ಮನೆಯಿಂದ ಹೊರಗುಳಿದು ಬಳಸಬೇಕು. ಅವಳ ಗಂಡನಿಗೂ ಮತ್ತು ಉಳಿದ ಸಪಿಂಡರಿಗೂ ಸ್ನಾನಮಾತ್ರದಿಂದ ಶುದ್ಧಿಯಾಗುವುದು.

ಗರ್ಭವು ತುಂಡು [ಚೂರು] ಆಗದೇ ಸಂಪೂರ್ಣ ಪಿಂಡರೂಪದಿಂದಲೇ ಪತನಹೊಂದಿದರೆ ಗಂಡನು [ತಂದೆಯು] ಮತ್ತು ಉಳಿದ

ಸಪಿಂಡರೂ ಮೂರು ರಾತ್ರಿ ಅಶೌಚವನ್ನು ಬಳಸಬೇಕು. ಕಲಿಯುಗದಲ್ಲಿ ಸ್ರಾವ-ಪತನ ಅಶೌಚವು ಸಪಿಂಡರಿಗೆ ಇಲ್ಲವೆಂದು ಹೇಳಿದೆ.

---

**ಶತಶ್ಲೋಕೀ** :–ತ್ರ್ಯಹಂ ಮಾಸತ್ರಯೇ ಮಾತುಃ ಗರ್ಭಸ್ರಾವೇ ತತಃ ಪರಮ್ ।
ಮಾಸತುಲ್ಯಾನ್ಯಹಾನ್ಯೂರ್ಧ್ವಂ ಷಾಣ್ಮಾಸಾತ್ಸೂತಿಕಾವಿಧಿಃ ॥
ಪಾತೇ ಸದ್ಯಸ್ತು ಕಠಿಣೇ ತ್ರ್ಯಹಂ ಪಿತ್ರಾದಿಷು ಸ್ಮೃತಮ್ ॥

**ಆಶೌಚಸಿದ್ಧಾಂತವ್ಯಾಖ್ಯಾ** :– ಗರ್ಭಧಾರಣಾನ್ಮಾಸಚತುಷ್ಟಯೇ ಸ್ರಾವಶ್ಚೇತ್ ಪಿತುಃ ಸ್ನಾನಮ್ । ಪಂಚಮ-ಷಷ್ಠಯೋಶ್ಚೇತ್ ಪಿತುಃ ಜ್ಞಾತೇಶ್ಚ ಸ್ನಾನಮ್ । ಪಂಚಮ-ಷಷ್ಠಯೋಃ ಗರ್ಭಸ್ಯ ಮಾಂಸಪಿಂಡರೂಪೇಣ ಪಾತೇ ಪಿತುಃ ಜ್ಞಾತೇಶ್ಚ ತ್ರಿರಾತ್ರಮಾಶೌಚಮ್ ॥

**ಮನುಃ** :– ರಾತ್ರಾಭಿಃ ಮಾಸತುಲ್ಯಾಭಿಃ ಗರ್ಭಸ್ರಾವೇ ವಿಶುದ್ಧ್ಯತಿ ।
ರಜಸ್ಯುಪರತೇ ಸಾಧ್ವೀ ಸ್ನಾನೇನ ಸ್ತ್ರೀ ರಜಸ್ವಲಾ ॥

**ಧರ್ಮಸಿಂಧೌ** :– ಆಚತುರ್ಥಾತ್ ಭವೇತ್ ಸ್ರಾವಃ ಪಾತಃ ಪಂಚಮ-ಷಷ್ಠಯೋಃ ।
ಅತ ಊರ್ಧ್ವಂ ಪ್ರಸೂತಿಃ ಸ್ಯಾತ್ ದಶಾಹಂ ಸೂತಕಂ ಭವೇತ್ ॥
[ತತ್ರಾಶೌಚಂ ವಿವಿಚ್ಯತೇ—ಇತ್ಯಾದಿ]

**ಇಲ್ಲಿಗೆ ಅಶೌಚನಿರ್ಣಯದಲ್ಲಿ ಒಂದನೆಯ ನಿರ್ಣಯವು ಮುಗಿಯಿತು.**

## ಅಥ ದ್ವಿತೀಯ ನಿರ್ಣಯಃ

### ೧. ಜಾತಾಶೌಚ ಪ್ರಕರಣಮ್

ಗರ್ಭಿಣಿಯಾಗಿ ಏಳನೇ ತಿಂಗಳಿನಿಂದ ಶಿಶು ಜನಿಸಲಿ ಅಥವಾ ಗರ್ಭ ಹಾಳಾಗಲೀ, ಅದು ಜನನವೆನಿಸುವುದು. ಈ ರೀತಿಯ ಜಾತಾಶೌಚವನ್ನು ಸಪಿಂಡರು ಹತ್ತು ರಾತ್ರಿ, ಸಕುಲ್ಯರು ಮೂರು ರಾತ್ರಿ, ಗೋತ್ರಜರು ಒಂದು ರಾತ್ರಿ, ಸಗೋತ್ರದವರು ಸ್ನಾನ ಪರ್ಯಂತ ಆಶೌಚವನ್ನು ಬಳಸಬೇಕು. ಜನನದಲ್ಲಿ ಅಸ್ಪೃಶ್ಯ ಆಶೌಚವು ಸಪಿಂಡಾದಿ ಜನರಿಗೆ ಇರುವುದಿಲ್ಲ. ತಂದೆಯೂ ಸಹ ಶಿಶು ಮುಖವನ್ನು ನೋಡಿ ಮೈಮೇಲೆ ಇರುವ ವಸ್ತ್ರದೊಂದಿಗೆ ಸ್ನಾನ ಮಾಡಿದರೆ ಅಸ್ಪೃಶ್ಯ ಆಶೌಚದಿಂದ ಶುದ್ಧಿಯಾಗುವನು ಎಂದು ಹೇಳಿದೆ. ಸಪಿಂಡರಂತೆ ಸಾಮಾನ್ಯ ಆಶೌಚವನ್ನು ಬಳಸಲೇಬೇಕೆಂದು ತಿಳಿಸಿರುವರು. ಈ ವಿಷಯದ ಆಧಾರ ವಚನಗಳನ್ನು ಮುಂದೆ ಐದನೇ ಕಲಂ ಆಶೌಚದಲ್ಲಿ ಅಸ್ಪೃಶ್ಯತ್ವ ವಿಚಾರವೆಂಬಲ್ಲಿ ವಿಮರ್ಶಿಸಿ ಬರೆಯಲಾಗಿದೆ.

### ೨. ಪೂರ್ಣಾಶೌಚ ವಿಚಾರ (ವರ್ಣವ್ಯವಸ್ಥೆ)

ಸರಿಯಾದ ಜನನ-ಮರಣಾಶೌಚವನ್ನು ಬ್ರಾಹ್ಮಣರು ಹತ್ತು ರಾತ್ರಿ, ಕ್ಷತ್ರಿಯರು ಹನ್ನೆರಡು ರಾತ್ರಿ, ವೈಶ್ಯರು ಹದಿನೈದು ರಾತ್ರಿ, ಶೂದ್ರರು ಒಂದು ತಿಂಗಳ ಪರ್ಯಂತ ಬಳಸಬೇಕೆಂತಲೂ, ಇದು ಅನೇಕ ಋಷಿ ಸಮ್ಮತವೆಂದೂ ಹೇಳಿರುವರು. ಆದರೆ, ಈ ಕಲಿಯುಗದಲ್ಲಿ ಎಲ್ಲಾ ವರ್ಣದವರೂ ಸಹ ಹತ್ತು ರಾತ್ರಿ ಆಶೌಚವನ್ನು ಬಳಸಿದರೆ ಸಾಕು. ಅಷ್ಟುಮಾತ್ರದಿಂದಲೇ ಶುದ್ಧಿಯಾಗುವರು ಎಂದು ಹೇಳಿರುವರು.

ಗರುಡ ಪುರಾಣದಲ್ಲಿ ಎಲ್ಲ ವರ್ಣದವರು ಹತ್ತು ರಾತ್ರಿ ಆಶೌಚವನ್ನು ಬಳಸಿ ಏಕೋದ್ದಿಷ್ಟಾದಿಗಳನ್ನು ಮುಗಿಸಿ, ಹನ್ನೆರಡನೇ ದಿವಸ ಸಪಿಂಡೀಕರಣವನ್ನೂ ಸಹ ಮುಗಿಸಿ ಆಶೌಚವನ್ನು ಶುದ್ಧಿ ಮಾಡಿಕೊಳ್ಳಬೇಕೆಂದು ಸ್ಪಷ್ಟವಾಗಿಯೇ ಹೇಳಿದೆ. ಆದ್ದರಿಂದ ಆಂಗೀರಸ, ಶಾತಾತಪ, ದೇವಲ, ಭಗವಾನ್ ಮಹಾವಿಷ್ಣು ಮೊದಲಾದವರ ಮತದಂತೆ ಈ ಕಲಿಯುಗದಲ್ಲಿ ಎಲ್ಲ ವರ್ಣದವರೂ ಸಹ ಹತ್ತು ರಾತ್ರಿ ಆಶೌಚವನ್ನು ಬಳಸುವದೇ ಪ್ರಶಸ್ತ ಪಕ್ಷವಾಗಿದೆ. ಹಿಂದಿನವರ ಆಚಾರವೂ ಸಹ ಹಾಗೆಯೇ ಬಂದಿರುತ್ತದೆ. ಬ್ರಾಹ್ಮಣ ವರ್ಣದಲ್ಲಂತೂ ಯಾವ ಸಂಶಯವೂ ಇಲ್ಲದಿರುವದರಿಂದ ಹತ್ತು ರಾತ್ರಿ ಆಶೌಚ ಬಳಸಬೇಕೆಂಬುದು ಸರ್ವಸಮ್ಮತವಾಗಿದೆಯೆಂದು ತಿಳಿಯಬೇಕು. ಆದ್ದರಿಂದ ಪೂರ್ಣಆಶೌಚವೆಂದು

ಅಥ ದ್ವಿತೀಯ ನಿರ್ಣಯ।

ಬರೆದ ಸ್ಥಳಗಳಲ್ಲಿ ಸಪಿಂಡರು ಹತ್ತು ರಾತ್ರಿ, ಸೋದಕರು ಮೂರು ರಾತ್ರಿ, ಏಕಾಹಿಗಳು ಒಂದು ರಾತ್ರಿ, ಸಗೋತ್ರದವರು ಸ್ನಾನಪರ್ಯಂತ ಆಶೌಚವನ್ನು ಬಳಸಬೇಕು. ಈ ನಿರ್ಣಯವು ಸರಿಯಾದ ಜನನಮರಣ ಆಶೌಚಗಳೆರಡರಲ್ಲಿಯೂ ಒಂದೇ ರೀತಿಯಾಗಿದೆಯೆಂದು ತಿಳಿಯಬೇಕು.

---

**ಶಂಖಃ**:– ಜನ್ಮಹಾನ್ಯೋಽಸ್ತು ವರ್ಣಾನಾಂ ದಶ ಷೋಡಶ ವಿಂಶತಿಃ ।
ತ್ರಿಂಶನ್ನಿಶಾಃ ಕ್ರಮೇಣಾಽಘಮಿತ್ಯನೇಕರ್ಷಿಸಂಮ್ಮತಮ್ ॥

**ಮನುಃ**:– ಶುಧ್ಯೇದ್ವಿಪ್ರೋ ದಶಾಹೇನ ದ್ವಾದಶೇಽಹನಿ ಭೂಮಿಪಃ ।
ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಶುಧ್ಯತಿ ॥

**ಅಂಗಿರಾಃ**:– ಸರ್ವೇಷಾಮೇವ ವರ್ಣಾನಾಂ ಸೂತಕೇ ಮೃತಕೇಽಪಿ ವಾ ।
ದಶಾಹಾಚ್ಛುದ್ಧಿರೇತೇಷಾಂ ಇತಿ ಶಾತಾತಪೋಽಬ್ರವೀತ್ ॥

**ದೇವಲಃ**:– ಆಶುಚ್ಯಂ ದಶರಾತ್ರಂ ತು ಸರ್ವೇಷಾಮಪರೇ ವಿದುಃ ॥

**ಗಾರುಡೇ**:– ಸರ್ವೇಷಾಮೇವ ವರ್ಣಾನಾಂ ಸೂತಕೇ ಮೃತಕೇ ತಥಾ ।
ದಶಾಹಾಚ್ಛುದ್ಧಿರಿತ್ಯೇಷಾ ಕಲೌ ಶಾಸ್ತ್ರಸ್ಯ ನಿರ್ಣಯಃ ॥

ಸರ್ವೇಷಾಮೇವ ವರ್ಣಾನಾಂ ದ್ವಾದಶಾಹೇ ಸಪಿಂಡನಂ ॥ ಇತ್ಯುಕ್ತತ್ವಾತ್ ಸರ್ವೇಷಾಮಪಿ ವರ್ಣಾನಾಂ ದಶರಾತ್ರ್ಯಾಚರಣಾದೇವ ಶುದ್ಧಿರಿತ್ಯವಗಮ್ಯತೇ। ಆಶೌಚಾಂತೇ ಸಪಿಂಡನಂ ಇತ್ಯುಕ್ತತ್ವಾತ್ ಇತಿ।

**ವಸಿಷ್ಠಃ**:– ದಶಾಹೇನ ಸಪಿಂಡಾನಾಂ ಶುದ್ಧಿಃ ಸ್ಯಾತ್ತು ತ್ರಿರಾತ್ರತಃ ।
ಸಮಾನೋದಕಜಾತಾನಾಂ ಗೋತ್ರಜಾನಾಮ್ ಅಹಃಸ್ಮೃತಮ್ ॥ಇತಿ॥

ಕಲಿಯುಗೇ ಸರ್ವವರ್ಣಾನಾಂ ಏಕರೂಪತಯಾ ಆಶೌಚವ್ಯವಸ್ಥಾ ಕೃತಾ ಇತಿ ಮಂತವ್ಯಮ್ ॥

## ೩. ಸೂತಿಕಾ (ಹಡೆದವಳ) ಆಶೌಚ (ಹಕ್ಕೆ ದೋಷ)

ಹಡೆದ ಸ್ತ್ರೀಯು (ಬಾಣಂತಿಯು) ಗಂಡುಮಗು ಹುಟ್ಟಿದರೆ ಜನನದಿವಸದಿಂದ ಮೂವತ್ತು ದಿವಸ ಅಂದರೆ ಒಂದು ತಿಂಗಳವರೆಗೆ ಅಶುಚಿಯಾಗಿರುವಳು. ಹೆಣ್ಣು ಮಗು ಹುಟ್ಟಿದರೆ ಜನನ ದಿವಸದಿಂದ ನಲ್ವತ್ತು ದಿವಸಗಳವರೆಗೆ ಅಶುಚಿಯಾಗಿರುವಳು. ಮೊದಲು ಹತ್ತು ದಿವಸ ವಚನ, ದರ್ಶನ, ಸ್ಪರ್ಶ, ಹವ್ಯ–ಕವ್ಯ ಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ. ಹತ್ತು ದಿವಸಗಳ ನಂತರ ವಚನ ದರ್ಶನಗಳಲ್ಲಿ ಮಾತ್ರ ಶುದ್ಧಿಯು. ಸ್ಪರ್ಶ, ಹವ್ಯ–ಕವ್ಯ ಕರ್ಮಗಳಲ್ಲಿ ಅಧಿಕಾರವು ಗಂಡಾದರೆ ಮೂವತ್ತು, ಹೆಣ್ಣಾದರೆ ನಲ್ವತ್ತು ದಿವಸಗಳ ನಂತರವೇ ಪ್ರಾಪ್ತವಾಗುವವು. ಮೂವತ್ತು ಅಥವಾ ನಲ್ವತ್ತು ದಿವಸಗಳ ನಂತರವೇ ಪತಿಯೊಡನೆ

ಎಲ್ಲ ಧರ್ಮಕರ್ಮಗಳಲ್ಲಿ ಸೇರಿಕೊಳ್ಳಬೇಕು. ಅಲ್ಲಿಯವರೆಗೆ ಅವಳಿಗೆ ಸೂತಿಕಾಶೌಚವು (ಹಕ್ಕೇದೋಷ) ಇರುತ್ತದೆ ಎಂದು ಹೇಳಿದೆ.

---

**ಶತಕೇ:–** ದಶಾಹಂ ದರ್ಶನಂ ವಾಕ್ಯಂ ಸೂತಿಕಾಯಾಸ್ತ್ಯಜೇತತ್ತಃ ।
ಆಘಾಂತಂ ಸ್ಪರ್ಶಮೇವೇತ್ಥಮ್ ಇತ್ಯಾದಿ ವಚನಾನಿ ॥

**ತತ್ರೈವ :–** ಚತ್ವಾರಿಂಶದ್ದಿನಾನಿ ಸ್ಯುಃ ಜನನ್ಯಾಃ ಸ್ತ್ರೀ ಪ್ರಸೂತಕೇ ॥
ತ್ರಿಂಶತ್ ಪುಂಪ್ರಸವೇತ್ವಘಮ್ ॥

**ಧರ್ಮಸಿಂಧೌ:–** ಜನನಾಽಶೌಚೇ ಗರ್ಭಿಣ್ಯಾಃ ದಶಾಹಮಸ್ಪರ್ಶತ್ವಮ್ ।
ಕರ್ಮಾಧಿಕಾರಸ್ತು ಕನ್ಯೋತ್ಪತ್ತೌ ಮಾಸಂ ಪುತ್ರೋತ್ಪತ್ತೌ ವಿಂಶತಿ ರಾತ್ರಂ ಇದಂ ಸ್ವಸ್ಯಾಽಶೌಚೋತ್ತರಮಿತಿ । ವಿಪ್ರಸ್ತ್ರಿಯಾಃ ಕ್ರಮೇಣ ಚತ್ವಾರಿಂಶತ್ತ್ರಿಂಶದ್ದಿನಾನಿ ಕರ್ಮಣ್ಯನಧಿಕಾರಃ ॥

## ೪. ಆಶೌಚದಲ್ಲಿ ಅಸ್ಪೃಶ್ಯತ್ವ ವಿಚಾರ

ಮರಣಾಶೌಚದಲ್ಲಿ ಆಶೌಚ ಆಚರಿಸುವವರು ಆಶೌಚಾಂತ್ಯದವರೆಗೂ ಅಸ್ಪೃಶ್ಯರಾಗಿಯೂ ಹವ್ಯ–ಕವ್ಯಕರ್ಮಗಳಲ್ಲಿ ಅನಧಿಕಾರಿಗಳಾಗಿಯೂ ಇರುತ್ತಾರೆ.

ಜನನಾಶೌಚದಲ್ಲಿ ಮೊದಲಿನ ನಾಲ್ಕು ದಿವಸಗಳವರೆಗೆ ಅಸ್ಪೃಶ್ಯ ಆಶೌಚವೆಂದೂ ಕೆಲವರು ಹೇಳುವರು. ಆದರೆ, ಕಲಿಯುಗದಲ್ಲಿ ಜಾತಾಶೌಚದಲ್ಲಿ ಸಪಿಂಡಾದಿ ಜನರಿಗೆ ಅಸ್ಪೃಶ್ಯರೂಪ ಆಶೌಚವಿಲ್ಲವೆಂದು ಪರಾಶರಾದಿಗಳು ಹೇಳಿರುವರು. ತಂದೆಯೂ ಸಹ ಜನನದ ದಿವಸ ಶಿಶುಮುಖವನ್ನು ಅವಲೋಕಿಸಿ ಧರಿಸಿದ ವಸ್ತ್ರಗಳೊಂದಿಗೆ (ಸಚೇಲ) ಸ್ನಾನ ಮಾಡಿದರೆ ಅಸ್ಪೃಶ್ಯ ಆಶೌಚದಿಂದ ಶುದ್ಧನಾಗುವನೆಂದು ನಿರೂಪಿಸಿರುವರು. ಸಾಮಾನ್ಯ ಆಶೌಚವು ತಂದೆಗೆ ಇದ್ದೇ ಇರುತ್ತದೆ ಎಂದು ತಿಳಿಯಬೇಕು.

---

**ತಾತ್ಪರ್ಯ ಬೋಧಿನೀ ವ್ಯಾಖ್ಯಾಯಾಮ್ :–**ಅತ್ರ ಜನನಾಽಶೌಚೇ ಜ್ಞಾತೇಃ ನಾಸ್ತ್ಯಸ್ಪೃಶ್ಯತಾಶೌಚಮ್ । ಪಿತಾಪಿ ಶಿಶುಮುಖಮವಲೋಕ್ಯ ಸಚೇಲಂ ಸ್ನಾತಃ ಸ್ಪೃಶ್ಯೋ ಭವತಿ ಇತಿ ಪರಾಶರೀಯಾದೌ ರೂಪಿತಮಿತಿ। ಎಂದು ಹೇಳಿದೆ.

**ಸ್ಮೃತ್ಯಂತರೇ:–**ಶುಧ್ಯೇನ್ನಾತಾ ದಶಾಹೇನ ಅವಗಾಹ್ಯ ಪಿತಾಶುಚಿಃ ।

## ೫. ತಂದೆಯ ಬಗ್ಗೆ ವಿಶೇಷ ವಿಚಾರ

ತಂದೆಯು ಶಿಶುಮುಖವನ್ನು ನೋಡಿ ಸಚೇಲಸ್ನಾನ ಮಾಡದೇ ಇದ್ದರೆ ಆ ಆಶೌಚಾಂತ್ಯದವರೆಗೂ ಅಸ್ಪೃಶ್ಯ ಆಶೌಚವನ್ನು ಬಳಸಬೇಕು. ಯಮಳ (ಅವಳಿಜವಳಿ) ಮಕ್ಕಳು ಜನಿಸಿದರೂ ತಂದೆಯು ಅಸ್ಪೃಶ್ಯ ಆಶೌಚವನ್ನು ಬಳಸಬೇಕು.

ಅಥ ದ್ವಿತೀಯ ನಿರ್ಣಯಃ

ತಂದೆಯು ಪ್ರಸೂತಿಯ (ಬಾಳಂತಿಯ) ಸಂಪರ್ಕಮಾಡಿಕೊಂಡರೂ ಮತ್ತು ಪ್ರಸೂತಿಯ ಕೋಣೆಯಲ್ಲಿ ಭೋಜನ ಶಯನಾದಿಗಳನ್ನು ನಡೆಸಿದರೂ ಸಹ ಆಶೌಚಾಂತ್ಯದವರೆಗೂ ಅಸ್ಪೃಶ್ಯ ಆಶೌಚವನ್ನು ಬಳಸಬೇಕು ಎಂದು ಹೇಳಿರುವರು.

---

ಯಮಃ:-ಯಮಯೋರ್ಜನನೇ ಚೈವಂ ಪಿತುರಸ್ಪೃಶ್ಯತಾ ಸ್ಮೃತಾ ॥

ಸ್ಮೃತಿರತ್ನೇ:- ಸಂಪರ್ಕಾಜ್ಜಾಯತೇ ದೋಷಃ ನಾನ್ಯದೋಷೋऽಸ್ತಿ ವೈ ದ್ವಿಜೇ ।
ತಸ್ಮಾತ್ಸರ್ವಪ್ರಯತ್ನೇನ ಸಂಪರ್ಕಂ ವರ್ಜಯೇತ್ಕಲೌ ॥

ವಸಿಷ್ಠಃ:- ನಾऽಶೌಚಂ ಸೂತಕೇ ಪುಂಸಃ ಸಂಸರ್ಗೇ ಚೇನ್ನ ಗಚ್ಛತಿ ।
ತತ್ಸಂಪರ್ಕಾದ್ಭವೇದೇನಃ ಶುದ್ಧಸ್ಯಾಪಿ ನ ಸಂಶಯಃ ॥ಇತಿ॥

ವಿಜ್ಞಾನೇಶ್ವರಃ:- ಆಶೌಚಂ ಯಸ್ಯ ಸಂಪರ್ಕಾದಾಪತೇದ್ಗೃಹಮೇಧಿನಃ ।
ಕ್ರಿಯಾಸ್ತಸ್ಯ ವಿಲುಪ್ಯಂತೇ ಗೃಹ್ಯಾಣಾಂ ಚ ನ ತದ್ಭವೇತ್ ॥ಇತಿ॥

## ೬. ತಂದೆಯ ಮನೆಯಲ್ಲಿ ಮಗಳು ಹಡೆದರೆ? ವಿಚಾರ

ತಂದೆಯ ಗೃಹದೊಳಗೆ ಮಗಳು ಹಡೆದರೆ ತಾಯಿತಂದೆಯರು ಮೂರು ರಾತ್ರಿ ಆಶೌಚವನ್ನು ಆಚರಿಸಬೇಕು. ಅದೇ ಮನೆಯೊಳಗೆ ಅಣ್ಣತಮ್ಮಂದಿರಿದ್ದರೆ ಅವರೂ ಸಹ ಮೂರು ರಾತ್ರಿ ಆಶೌಚವನ್ನು ಆಚರಿಸಬೇಕೆಂದು ಕೆಲವರು ಮಾತ್ರ ಹೇಳುವರು. ಮತ್ತೆ ಕೆಲವರು ಒಂದು ರಾತ್ರಿ ಆಶೌಚವನ್ನು ಬಳಸಿದರೂ ಸಾಕೆಂದು ಹೇಳಿರುವರು. ಅಜ್ಜನ ಮನೆಯಲ್ಲಿ (ಮಾತಾಮಹ ಮಾತುಳಾದಿಗಳ ಮನೆಯಲ್ಲಿ) ಹಡೆದರೆ ಅವರೂ ಸಹ ಒಂದು ರಾತ್ರಿ ಆಶೌಚವನ್ನು ಬಳಸಬೇಕು. ತಂದೆಯಂತೆ ಅಣ್ಣತಮ್ಮಂದಿರು ಎಂದು ಹೇಳಿರುವುದರಿಂದ ಮೂರು ರಾತ್ರಿ ಎಂದು, ಮತ್ತೆ ಕೆಲವರು ಒಂದೇ ರಾತ್ರಿ ಸಾಕು ಎಂದೂ ಹೇಳಿರುವರು. ಈ ವಿಷಯದಲ್ಲಿ ಲೋಕಾಚಾರ ಹೇಗಿದೆಯೋ ಹಾಗೆ ನಡೆದುಕೊಳ್ಳಬೇಕು. ಮಗಳು ಬೇರೆಯವರ ಮನೆಯಲ್ಲಿ ಅಥವಾ ದವಾಖಾನೆಯಲ್ಲಿ ಹಡೆದರೆ ಮೂರು ದಿವಸದೊಳಗೆ ತಂದೆಯೂ, ತನ್ನ ಮನೆಗೇ ಕರೆತಂದರೆ ಮೂರು ದಿವಸಕ್ಕೆ ಅವಶಿಷ್ಟ ದಿವಸ ಆಶೌಚವನ್ನು ಆಚರಿಸಬೇಕು. ಮಗಳು ದವಾಖಾನೆಯಿಂದ ತನ್ನ ಮನೆಗೆ ಹೋದರೆ ತಾಯಿತಂದೆ ಮೊದಲಾದವರಿಗೆ ಯಾರಿಗೂ ಏನೂ ಆಶೌಚವಿಲ್ಲವೆಂದು ತಿಳಿಯಬೇಕು.

---

**ಆಶೌಚ ಸಿದ್ಧಾಂತ:-** ಮತ್ಕನ್ಯಾಸ್ತು ಗೇಹೇ ಪ್ರಸವೇ ತ್ರಿರಾತ್ರಂ ಪಿತ್ರೋಃ ಪರತ್ರ ಪ್ರಸವೇ ನ ಕಿಂಚಿತ್ ।
ಗೃಹೇಷು ಚೇತ್ ಮಾತುಳಮುಖ್ಯಬಂಧೋಃ ಅಘಂ ಪ್ರಸೂತೇರ್ದಿನಮೇವ ತಸ್ಯಾಃ ॥

**ತಾತ್ಪರ್ಯಬೋಧಿನೀ:-** ಊಢಕನ್ಯಾಯಾಃ ಪಿತೃಗೃಹೇ ಪ್ರಸವೇ ಪಿತ್ರೋಸ್ತ್ರಿರಾತ್ರಮ್। ಮಾತುಳಪಿತೃವ್ಯಾದಿಬಂಧೂನಾಂ ಗೃಹೇ ಪ್ರಸವೇ ತೇಷಾಮ್ ಏಕಂ ದಿನಮ್ ॥ಇತಿ॥

ಅನ್ಯತ್ರ ಚೇತ್ ಪಿತ್ರೋಃ ಬಂಧೂನಾಂ ಚ ನಾಸ್ತ್ಯಾಶೌಚಮ್ ॥ಇತಿ॥

**ಸ್ಮೃತಿಸಾರಸರ್ವಸ್ವ:-** ಪ್ರಸೂತಿರ್ಮರಣಂ ಗೃಹೇ । ಪಿತೃಗೃಹೇ ಚೇತ್ ಇತ್ಯಾದಿ ವಚನೈಃ ಸ್ವಗೃಹೇ ಪ್ರಸೂತಿ ನಿಬಂಧನತ್ವಾತ್ ಅನ್ಯತ್ರ ಪ್ರಸವೇ ಪಿತುರಪಿ ನ ಸೂತಕಮ್ ।ತದ್ಬಂಧುವರ್ಗಸ್ತ್ವೇಕೇನ (ಇತ್ಯಾದಿ ವಚನೈಃ) ಬಂಧೂನಾಂ ಮಾತುಳಾದೀನಾಂ ಬಂಧುತ್ವ ಅವಲಂಬನೇನೈವ ದಿನ ವಿಧಾನಾತ್ ॥ಇತಿ॥ ಪಿತೃವತ್ ಮತ್ರಸ್ಯಾಪಿ ಸ್ವಾಮಿತ್ವಾವಿಶೇಷಾತ್ ಸ್ವಗೃಹೇ ಸ್ವಸುಃ ಪ್ರಸವೇ ತ್ರಿದಿನಂ ಸೂತಕಂ ಭವತಿ। ಇತಿ ಕೇಚನ। ಬಹವಃ ತ್ವೇಕಂ ದಿನಮಿತಿ ಅನ್ಯತ್ರ ಪ್ರಸವೇ ನಾಸ್ತ್ಯಾಶೌಚಮ್ ॥ಇತಿ॥ ಯಥಾ ಲೋಕಾಽಚಾರವದ್ವ್ಯವಸ್ಥಾ ಜ್ಞೇಯಾ ॥ಇತಿ॥

## ೭. ರಾತ್ರಿ ಜನನ, ಮರಣ, ರಜಸ್ವಲಾ ಆದರೆ (ದಿನಗಣನೆ ವಿಚಾರ)

ರಾತ್ರಿಮಾನದ ಪೂರ್ವಭಾಗದ ಸಂಧ್ಯಾಂಶ ಮೂರುಮುಕ್ಕಾಲು ಘಟಿಯನ್ನು, ಹಾಗೆಯೇ ರಾತ್ರಿಯ ಕೊನೆಭಾಗದ ಸಂಧ್ಯಾಂಶ ಮೂರುಮುಕ್ಕಾಲು ಘಟಿಯನ್ನು ಬಿಟ್ಟು ಉಳಿದ ರಾತ್ರಿಯ ಮಾನವನ್ನು ಮೂರು ವಿಭಾಗಮಾಡಿ ಮೊದಲನೇ ಎರಡು ಭಾಗದಲ್ಲಿ ಜನನ ಮರಣ ಋತು ಸಂಭವಿಸಿದರೆ ಮೊದಲನೇ ದಿನವೆಂತಲೂ, ಮೂರನೇ ಭಾಗದಲ್ಲಿ ಸಂಭವಿಸಿದರೆ ಮಾರನೇ ದಿನವೆಂತಲೂ ಪರಿಗಣಿಸಬೇಕೆಂದು ಹೇಳಿರುವರು. ಕೆಲವು ಸ್ಮೃತಿಗಳಲ್ಲಿ ರಾತ್ರಿಯ ಮಾನವನ್ನು ಮೂರು ಭಾಗ ಮಾಡಿ ಮೊದಲಿನ ಎರಡು ಭಾಗಗಳಲ್ಲಿ ಸಂಭವಿಸಿದರೆ ಮೊದಲನೇ ದಿನವೆಂದು ಮೂರನೇ ಭಾಗದಲ್ಲಿ ಸಂಭವಿಸಿದರೆ (ಪರದಿನ) ಮಾರನೇ ದಿವಸವೆಂದೂ ಹೇಳಿರುವರು.

ಉದಯದಿಂದ ಉದಯದವರೆಗೆ ಒಂದು ದಿನ ಅಥವಾ ಅರ್ಧರಾತ್ರಿಯ ನಂತರ ಮಾರನೇ ದಿನ ಅಥವಾ ವಾರವೂ (ದೋಷ) ಇರುವದಿಲ್ಲ. ಅಥವಾ ಸೂರ್ಯಾಸ್ತಾನಂತರ ವಾರವು ಇರುವದಿಲ್ಲ ಎಂಬಿವೇ ಮೊದಲಾದ ಮಾತುಗಳು ಈ ವಿಷಯದಲ್ಲಿ ನಮ್ಮ ದೇಶಕ್ಕೆ ಸಂಬಂಧಪಟ್ಟ ವಚನವಲ್ಲವೆಂದು ತಿಳಿಯಬೇಕು.

---

**ತಾತ್ಪರ್ಯ ಬೋಧಿನೀವ್ಯಾಖ್ಯಾ :-** ರಾತ್ರೇರಾದೌ ಸಂಧಿರೂಪಂ ಯಾಮಾರ್ಧಂ ಅಂತೇ ಚ ಯಾಮಾರ್ಧಮಿತಿ ಸಂಧ್ಯಾದ್ವಯಾಂಶಂ ಏಕಂ ಯಾಮಂ ವಿಹಾಯ ಮಧ್ಯಗತ ತ್ರಿಯಾಮಾಯಾಃ ತೃತೀಯ ಭಾಗಾತ್ ಪ್ರಾಕ್ ಜನ್ಮರ್ತುಮೃತ್ಯವಃ ಯದಿ ಸ್ಯುಃ ತದಾನೀಂ ಪೂರ್ವದಿನಾದ್ಯಘಂ ಗಣಯೇತ್ । ತೃತೀಯ ಯಾಮೇ ಚೇತ್ ಪರದಿನಾದಿ ಗಣಯೇದಿತ್ಯರ್ಥಃ ।

**ಸ್ಮೃತಿಸಾರ ಸರ್ವಸ್ವೇ:**– ಸಂಧ್ಯಾಕಾಲವ್ಯತಿರೇಕೇಣ ರಾತ್ರಿಮಾನಾನುಸಾರೇಣ ರಾತ್ರಿಂ ತ್ರೇಧಾ ವಿಭಜ್ಯ ತತ್ರಾಽದ್ಯೌ ದ್ವಾವಂಶೌ ವಿಹಾಯ ತೃತೀಯಾಂಶೇ ಯದಿ ಜನ್ಮರ್ತುಮೃತ್ಯವಃ ಸ್ಯುಃ ತದಾ ಪ್ರಭಾತಾದಿ ಪರದಿನಾದ್ಯಘಂ ಭವತಿ ॥ ಇತಿ ॥

**ಪರಾಶರಃ:**– ತೃತೀಯಭಾಗೇ ಸಂಪ್ರಾಪ್ತೇ ಮಲಂ ಸ್ಯಾನ್ನಿಶಿ ಚೇತ್ ಸ್ತ್ರಿಯಾಃ ।
ಪ್ರಭಾತಾದಿ ತ್ರಿರಾತ್ರೇಣ ಶುದ್ಧಿಂ ತಸ್ಯಾಪಿ ನಿರ್ದಿಶೇತ್ ॥

**ಕಶ್ಯಪಃ:**– ರಾತ್ರಿತುರ್ಯತ್ರಿಭಾಗಂ ತು ದ್ವೌ ಭಾಗೌ ಪೂರ್ವ ಏವ ತು ।
ಉತ್ತರಾಂಶಃ ಪ್ರಭಾತೇನ ಯುಜ್ಯತೇ ಮೃತಸೂತಕೇ ॥

**ಹಾರೀತಃ:**– ಋತೌ ಚ ಸೂತಕೇ ಶಾವೇ ತೃತೀಯಾಂಶಃ ಪರಾನ್ವಿತಃ ।
ಆದ್ಯೌ ದ್ವಾವಂಶಕೌ ಯುಕ್ತೌ ಪೂರ್ವೇಣಾಹ್ನೇತಿ ನಿಶ್ಚಯಃ ॥

**ಸಂಗ್ರಹೇ:**– ರಾತ್ರಿಭಾಗಂ (ಮಾನಂ) ತ್ರಿಧಾ ಕೃತ್ವಾ ದ್ವೌ ಭಾಗೌ ಪೂರ್ವ ಏವ ತು ।
ಉತ್ತರಂ ಚ ಪ್ರಭಾತೇನ ಗಣಯೇದಿತಿ ಶಾಸನಮ್ ॥

**ಸ್ಮೃತ್ಯರ್ಥಸಾರೇ:**– ರಾತ್ರೇಃ ತೃತೀಯಭಾಗಾತ್ ಪ್ರಾಕ್ ಯದಿನಾರೀ ರಜಸ್ವಲಾ । ಪೂರ್ವೇಣಾಹ್ನಾ ತು ಸಾ ಶುಧ್ಯೇತ್ ಊರ್ಧ್ವಂ ಚೇದುತ್ತರೇಣ ತು । ಉದಯಾದುದಯಂ ವಾರಃ । ಅರ್ಧರಾತ್ರಾದಧಸ್ತಾತ್ಸ್ಯಾಚ್ಚೇತ್ । ನ ವಾರಸ್ತಸ್ಮಾದುಪರಿ ಇತ್ಯಾದಿ ವಚನಾನಿ ಏತಸ್ಮಿನ್ ವಿಷಯೇ ನ ಪ್ರಮಾಣಭೂತಾನಿ ಭವಂತಿ ॥ಇತಿ ಜ್ಞೇಯಮ್ ॥

॥ ದ್ವಿತೀಯ ನಿರ್ಣಯವು ಮುಗಿಯಿತು ॥

# ಅಥ ತೃತೀಯ ನಿರ್ಣಯಃ

## ೧ ಮೃತಾಶೌಚ ಪ್ರಕರಣಮ್ ॥

ಸರಿಯಾದ ಮೃತಾಶೌಚವನ್ನು ಹಿಂದೆ ಹೇಳಿದಂತೆ ಸಪಿಂಡರು ಹತ್ತು ರಾತ್ರಿ, ಸಕುಲ್ಯರು ಮೂರು ರಾತ್ರಿ, ಏಕಾಹಿಗಳು ಒಂದು ರಾತ್ರಿ, ಸಗೋತ್ರದವರು ಸ್ನಾನ ಪರ್ಯಂತ ಆಶೌಚವನ್ನು ಬಳಸಬೇಕು. ಮೃತಾಶೌಚದಲ್ಲಿ ಆಶೀರ್ವಾದ, ದೇವಪೂಜಾ, ಪ್ರತ್ಯುತ್ಥಾನ (ಸ್ವಾಗತ), ಅಭಿವಂದನೆ (ನಮಸ್ಕಾರ), ಪರ್ಯಂಕಶಯನ (ಯಾವಾಗಲೂ ಮಲಗುವ ಹಾಸಿಗೆ), ಪರಸ್ಪರ ಸ್ಪರ್ಶ (ಒಬ್ಬರನ್ನೊಬ್ಬರು ಮುಟ್ಟುವುದು), ನಿತ್ಯ, ನೈಮಿತ್ತಿಕ, ಕಾಮ್ಯಕರ್ಮಗಳು, ಹವ್ಯಕವ್ಯ, ದಾನ-ಪ್ರತಿಗ್ರಹ, ಅಧ್ಯಯನ-ಅಧ್ಯಾಪನ ಇವೇ ಮೊದಲಾದ ಯಾವುದೇ ರೀತಿಯ ಕರ್ಮಕಲಾಪಗಳನ್ನು ಆಚರಿಸಬಾರದು. ಸಂಧ್ಯಾವಂದನೆಯನ್ನು ಮಾತ್ರ ಈ ಹಿಂದಿನ ಸಂಧ್ಯಾವಂದನೆ ಪ್ರಕರಣದಲ್ಲಿ (ಇದಲ್ಲಿ) ತಿಳಿಸಿದಂತೆ ಆಚರಿಸಬೇಕು. ಇನ್ನುಳಿದ ಯಾವ ಕರ್ಮಕಲಾಪಗಳನ್ನೂ ಆಚರಿಸುವಂತಿಲ್ಲ.

---

**ಶತಕೇ**–: ಶಾವೇ ಚ ಸೂತಕೇಽಥಾಪ್ಯೈ ಕರ್ಮಣಾಂ ತ್ಯಾಗ ಇಷ್ಯತೇ ।
ದ್ರವ್ಯಾಣ್ಯಪಿ ನಿಷಿದ್ಧ್ಯಂತೇ ಸ್ವಾಧ್ಯಾಯಶ್ಚ ನಿವರ್ತತೇ ॥

**ಗಾರುಡೇ**–: ಆಶೀರ್ವಾದಂ ದೇವಪೂಜಾಂ ಪ್ರತ್ಯುತ್ಥಾನಾಽಭಿವಂದನಮ್ ।
ಪರ್ಯಂಕೇ ಶಯನಂ ಸ್ಪರ್ಶಂ ನ ಕುರ್ಯಾನ್ಮೃತಸೂತಕೇ ॥

ಸಂಧ್ಯಾಂ ದಾನಂ ಜಪಂ ಹೋಮಂ ಸ್ವಾಧ್ಯಾಯಂ ಪಿತೃತರ್ಪಣಮ್ ।
ಬ್ರಹ್ಮಭೋಜ್ಯಂ ವ್ರತಂ ನೈವ ಕರ್ತವ್ಯಂ ಮೃತಸೂತಕೇ ॥

ನಿತ್ಯಂ ನೈಮಿತ್ತಿಕಂ ಕಾಮ್ಯಂ ಸೂತಕೇ ಯಸ್ಸಮಾಚರೇತ್ ।
ತಸ್ಯ ಪೂರ್ವಕೃತಂ ನಿತ್ಯಾದಿಕಂ ಕರ್ಮ ವಿನಶ್ಯತಿ ॥
ಇತ್ಯಾದಿ ವಚನಾನಿ ದೃಶ್ಯಂತೇ ।

## ೨. ಮೃತಜಾತ, ಜಾತಮೃತ ವಿಚಾರ (ಸತ್ತು ಹುಟ್ಟಿದ, ಹುಟ್ಟಿ ಸತ್ತ ವಿಚಾರ)

ಶಿಶುವು ಮೃತವಾಗಿಯೇ ಹುಟ್ಟಿದರೆ ಅಥವಾ ಆ ಶಿಶುವು ಹತ್ತು ರಾತ್ರಿಯೊಳಗೆ ಮೃತಪಟ್ಟರೆ, ಆ ಶಿಶುವನ್ನು ಭೂಮಿಯೊಳಗೆ ಹುಗಿಯಬೇಕು.

ದಹನ ಮಾಡಬಾರದು. ಸಪಿಂಡರು ಮೊದಲಾದ ಎಲ್ಲ ಜನರೂ ತಮಗೆ ಉಕ್ತವಾದಂತೆ ಸಂಪೂರ್ಣ ಜನನಾಶೌಚವನ್ನು ಮಾತ್ರ ಬಳಸಬೇಕು. ಮೃತಾಶೌಚವನ್ನು ಬಳಸುವ ಅವಶ್ಯಕತೆ ಇರುವುದಿಲ್ಲ. ತಂದೆಯು ಮಾತ್ರ ಹತ್ತು ದಿನಗಳವರೆಗೂ ಅಸ್ಪೃಶ್ಯ ಆಶೌಚವನ್ನು ಬಳಸಬೇಕು. ಶಿಶು ಜನಿಸಿ ನಾಲ್ಕೈದು ದಿವಸಗಳ ನಂತರ ಮೃತಪಟ್ಟರೂ ಸಹ ಮೃತಾಶೌಚವನ್ನು (ಪೃಥಕ್) ಬೇರೆಯಾಗಿ ಬಳಸುವ ಅವಶ್ಯಕತೆ ಇರುವುದಿಲ್ಲ. ಪೂರ್ವದ ಜಾತಾಶೌಚದಿಂದಲೇ ಎಲ್ಲರಿಗೂ ಶುದ್ಧಿಯಾಗುವದೆಂದು ಶಾಸ್ತ್ರದಲ್ಲಿ ಹೇಳಿರುವರು.

---

**ಆಶೌಚ ಸಿದ್ಧಾಂತೇ:**– ಮೃತೌ ದಶಾಹೇ ಖನನಂ ಶಿಶೋಃ ಸ್ಯಾತ್ ಜ್ಞಾತೇಶ್ಚ ಶಿಷ್ಟಾಹಮಘಂ ಪಿತುಶ್ಚ ।

**ತಾತ್ಪರ್ಯ ಬೋಧಿನೀ ವ್ಯಾಖ್ಯಾನೇ:**– ದಶಾಹಮಧ್ಯೇ ಶಿಶುಮೃತೌ ಪಿತುಃ ಜ್ಞಾತೇಶ್ಚ ಶತ್ತಯುಕ್ತಂ ಆಶೌಚಂ ಸೂತಕಾವಶಿಷ್ಟದಿನಪರ್ಯಂತಮೇವ । ಮೃತಶಿಶೋಶ್ಚ ಖನನಂ ವಿಧೇಯಮ್ । ಯದಿ ದಶಾಹಮಧ್ಯೇ ಶಿಶು ಮರಣೇऽಪಿ ಸೂತಕಮೇವ ಗ್ರಾಹ್ಯಂ, ನ ಶಾವಮಿತಿ ಪರಾಶರೀಯಾದೌ ನಿರೂಪಿತಮಿತಿ ॥

**ವಿಜ್ಞಾನೇಶ್ವರಃ :**– ಸಪ್ತಮಮಾಸಪ್ರಭೃತಿ ಮೃತಜಾತೇ, ಜಾತಮೃತೇ ವಾ ಜನನ ನಿಮಿತ್ತಮಾಶೌಚಂ ಪರಿಪೂರ್ಣಂ ಸಪಿಂಡಾನಾಮಿತಿ ।

**ಸ್ಮೃತ್ಯರ್ಥಸಾರೇ:**– ಜಾತಶಿಶುಮರಣೇ, ನಿಷ್ಪ್ರಾಣಶಿಶುನಿರ್ಗಮನೇನ ಚ ಜನನ– ನಿಮಿತ್ತಮಾಶೌಚಂ ಯಥಾವರ್ಣಂ ಸರ್ವೇಷಾಂ ಸಪಿಂಡಾನಾಂ ಸೂತಕಮಸ್ತ್ಯೇವ ಇತಿ ॥

**ವ್ಯಾಘ್ರಪಾದಃ:**– ಅಂತರ್ದಶಾಹೇ ಜಾತಸ್ಯ ಶಿಶೋರ್ನಿಷ್ಕ್ರಮಣಂ ಯದಿ ।
ಸೂತಕೇನೈವ ಶುದ್ಧಿಃಸ್ಯಾತ್ ಪಿತ್ರೋಃ ಶಾತಾತಪೋऽಬ್ರವೀತ್ ॥

**ಪಾರಸ್ಕರಃ:**– ಗರ್ಭೇ ಯದಿ ವಿಪತ್ತಿಃ ಸ್ಯಾತ್ ದಶಾಹಂ ಸೂತಕಂ ಭವೇತ್ ।

**ಶಾತಾತಪಃ:**– ಅಂತರ್ದಶಾಹೇ ಜಾತಸ್ಯ ಮರಣಂ ಯದಿ ಸಂಭವೇತ್ ।
ಸದ್ಯಃ ಶೌಚಂ ಸಪಿಂಡಾನಾಂ ಸೂತಕಂ ತು ಪ್ರವರ್ತತೇ॥ ಇತಿ।

**ಬ್ರಹನ್ಮನುಃ:**– ದಶಾಹಾಭ್ಯಂತರೇ ಬಾಲೇ ಪ್ರಮೀತೇ ತಸ್ಯ ಬಾಂಧವೈಃ ।
ಶಾವಾಶೌಚಂ ನ ಕರ್ತವ್ಯಂ ಸೂತ್ಯಾಶೌಚಂ ವಿಧೀಯತೇ ॥

## ೩. ಹೊಕ್ಕಳಮಾಲೆ ಕತ್ತರಿಸುವುದರೊಳಗೆ ಮೃತ ವಿಚಾರ

ಶಿಶುವು ಜನನವಾಗಿ ಹೊಕ್ಕಳ ಮಾಲೆ ಕತ್ತರಿಸುವುದರೊಳಗೆ ಮೃತವಾದರೆ ತಾಯಿಯು ಸಂಪೂರ್ಣ ಆಶೌಚವನ್ನೂ, ತಂದೆಯು ಮತ್ತು ಸಪಿಂಡದವರು ಮೂರು ರಾತ್ರಿ ಆಶೌಚವನ್ನು ಬಳಸಿದರೆ ಸಾಕೆಂದು ಕೆಲವು ಸ್ಮೃತಿಗಳು ಹೇಳಿವೆ.

ಯಾಕೆಂದರೆ, ಜನನದಲ್ಲಿ ನಾಳಚ್ಛೇದವನ್ನೂ, ಮರಣದಲ್ಲಿ ದಹನವನ್ನೂ ನಡೆಸದಿದ್ದರೆ ಆಶೌಚವು ಸಂಕೋಚವಾಗುವದೆಂಬ ಅಭಿಪ್ರಾಯವುಂಟು. ಆದರೆ ಈ ರೀತಿಯ ಸಮಾಚಾರವು ನಮ್ಮ ದಾಕ್ಷಿಣಾತ್ಯ ಪದ್ಧತಿಯಲ್ಲಿಲ್ಲ. ಜನನವಾದಮೇಲೆ ಜಾತಾಶೌಚವನ್ನೂ, ಮರಣದ ನಂತರ ಮೃತಾಶೌಚವನ್ನೂ ಸಂಪೂರ್ಣ ಬಳಸುವುದು ಸರ್ವಸಾಮಾನ್ಯವಾಗಿ ನಡೆದು ಬಂದಿದೆ. ಅಥವಾ ತಂದೆ ಮೊದಲಾದವರಿಗೆ ಮೂರು ದಿವಸ ಅಸ್ಪೃಶ್ಯ ಆಶೌಚವೆಂದು ಹೇಳಬಹುದು. ಗರ್ಭದಲ್ಲಿಯೇ ಶಿಶುವು ಮೃತಪಟ್ಟು ಜನಿಸಿದರೂ ಸಹ ತಂದೆ ಮೊದಲಾದವರು ಸಂಪೂರ್ಣ ಆಶೌಚವನ್ನು ಬಳಸಬೇಕೆಂದು ಹೇಳಿದೆ; ಅಥವಾ ಮೃತಾಶೌಚವನ್ನು (ಪೃಥಕ್) ಬೇರೆಯಾಗಿ ಬಳಸುವ ಅವಶ್ಯಕತೆ ಇಲ್ಲವೆಂದು ತಿಳಿಯಬೇಕು. ಆದ್ದರಿಂದ ಹೊಕ್ಕಳಮಾಲೆ ಕತ್ತರಿಸುವದರೊಳಗೆ ಶಿಶುವು ಮೃತವಾದರೂ ಸಹ ಎಲ್ಲ ಜನರು ತವಗೆ ಉಕ್ತವಾದ ರೀತಿಯಿಂದ ಸಂಪೂರ್ಣ ಜನನಾಶೌಚವನ್ನು ಬಳಸಬೇಕೆಂಬುದೇ ನಿರ್ಣಯವಾಗಿರುತ್ತದೆ ಎಂದು ತಿಳಿಯಬೇಕು.

---

**ಸಂಗ್ರಹೇ:-** ಯಾವನ್ನ ಛಿದ್ಯತೇ ನಾಲಂ ತಾವದಾಪ್ನೋತಿ ಸೂತಕಂ ।
ಛಿನ್ನೇ ನಾಲೇ ತತಃ ಪಶ್ಚಾತ್ ಸೂತಕಂ ತು ವಿಧೀಯತೇ ॥

**ಜೈಮಿನಿಃ:-** ನಾಡ್ಯಾಂ ಛಿನ್ನಾಯಾಮಾಶೌಚಮ್ ಇತಿ

**ಆಶೌಚ ಸಿದ್ಧಾಂತೇ:-** ನಾಭಿಕರ್ತನತಃ ಪೂರ್ವಂ ಶಿಶೌ ಪ್ರೇತೇ ತು ಸೂತಕಮ್ ।
ಮಾತುಃ ಪೂರ್ಣಮತೋಽನ್ಯೇಷಾಂ ಪಿತುಶ್ಚ ತ್ರಿದಿನಂ ಸಮಮ್ ॥

**ಸ್ಮೃತಿಸಾರಸರ್ವಸ್ವೇ:-** ನಾಭಿಭೇದಾತ್ ಪ್ರಾಕ್ ಸೂತಕಪ್ರಾಪ್ತ್ಯಸಂಭವೇನ ತ್ರ್ಯಹವಿಧ್ಯನುಪಪತ್ತೇಃ । ನಾಭಿಭೇದಾದೂರ್ಧ್ವಂ ಸೂತಕಪ್ರಾಪ್ತಿವಿಧಾನಾಚ್ಚ ವಿರೋಧಾದವ್ಯವಸ್ಥಾ । ತಥಾ ಅತ್ರಾಪಿ ಪಿತ್ರಾದೀನಾಂ ಅಸ್ಪೃಶ್ಯತ್ವಾದಿ ಲಕ್ಷಣಂ ಸೂತಕಂ ದಿನತ್ರಯಮಿತಿ ನ ಕಶ್ಚಿದ್ವಿರೋಧಃ । ಕಿಂತು ಗರ್ಭೇ ಯದಿ ವಿಪತ್ತಿಃ ಸ್ಯಾತ್ ದಶಾಹಂ ಸೂತಕಂ ಭವೇತ್। 'ಸೂತಕಂ ತು ವಿಧೀಯತೇ' 'ಸೂತ್ಯಾಶೌಚಂ ವಿಧೀಯತೇ' ಇತ್ಯಾದಿ ಸ್ಮೃತಿವಚನೈಃ ಸರ್ವೇಷಾಂ ಜಾತಾಶೌಚಂ ಸಂಪೂರ್ಣಂ ಭವತ್ಯೇವೇತಿ ಜ್ಞೇಯಮ್ ।

**ತಥಾನ್ಯತ್ರ :-** ತಥಾ ಅತ್ರಾಪಿ ತ್ರ್ಯಹವಿಷಯೈಃ ನಾಭಿಚ್ಛೇದಾತ್ ಪೂರ್ವಾಪರೀಭಾವವಿಷಯತ್ವಾಪ್ರತೀತೇಃ ವಚನಾಂತರಾಭಾವಾಚ್ಚ ಅನುದಾಹೃತತ್ವಾತ್ ಬಹುಸ್ಮೃತಿವಿರೋಧಾಚ್ಚ ನೇಯಂ ವ್ಯವಸ್ಥಾ ಉಪಪದ್ಯತೇ ॥ ಇತಿ

## ೪. ಶಿಶುವು ಹತ್ತನೇ ದಿನ ಮೃತವಾದರೆ

ಶಿಶುವು ಹತ್ತನೇ ದಿವಸ ಮೃತಪಟ್ಟರೆ ತಾಯಿತಂದೆಯರು ಎರಡು ದಿನ ಹೆಚ್ಚಿಗೆ ಆಶೌಚವನ್ನು ಬಳಸಬೇಕು. ಹತ್ತನೇ ದಿನ ರಾತ್ರಿ ಅಂತ್ಯಯಾಮದಲ್ಲಿ

ಶಿಶುವು ಮೃತಪಟ್ಟರೆ ತಾಯಿ ತಂದೆಯರು ಮೂರು ದಿವಸ ಹೆಚ್ಚಿಗೆ ಆಶೌಚವನ್ನು ಬಳಸಬೇಕು. ಸಪಿಂಡಾದಿಗಳಿಗೆ ಸ್ನಾನ ಮಾತ್ರದಿಂದಲೇ ಶುದ್ಧಿಯಾಗುವದು. ಈ ರೂಪದ ಶಿಶುವನ್ನು ಭೂಮಿಯಲ್ಲಿ ಹುಗಿಯಬೇಕು. ದಹನ ಮಾಡಬಾರದು ಎಂದು ಪರಾಶರಾದಿ ಋಷಿಗಳು ತಿಳಿಸಿರುವರು.

---

**ಆಶೌಚ ಸಿದ್ಧಾಂತೇ:–** ಅಂತ್ಯದಿನೇ ಚೇತ್ ಪಿತುರೇವ ಭೂಯಃ ದ್ವ್ಯಹಂ, ತ್ರ್ಯಹಂ ಚೇದ್ಯದಿ ಚಾಂತ್ಯಯಾಮೇ ।

**ತಾತ್ಪರ್ಯ ಬೋಧಿನೀ:–** ಯದಿ ದಶಮದಿನೇ ಶಿಶುಮರಣೇ ಪಿತುರೇವ ದಶಾಹಾತ್ಪರಂ ದ್ವ್ಯಹಂ ಅಧಿಕಮ್ ಆಶೌಚಂ ಗ್ರಾಹ್ಯಮ್। ತದ್ದಿನ ಏವ ಅಂತ್ಯಯಾಮೇ ಚೇತ್ ತ್ರ್ಯಹಮಧಿಕಮ್ ಆಶೌಚಂ ಗ್ರಾಹ್ಯಮ್ । ಮೃತಶಿಶೋಶ್ಚ ಖನನಂ ವಿಧೇಯಮಿತಿ । ಅತ್ರ ಪಿತುಃ ಇತ್ಯುಕ್ತತ್ವಾತ್ ಜನನ್ಯಾ ಅಪಿ ಗ್ರಾಹ್ಯಮಿತ್ಯರ್ಥಃ, ನ ಸಪಿಂಡಾನಾಮಿತಿ ॥

**ಶತಕೇ:–** ನಾಮ್ನಃ ಪ್ರಾಕ್ ಖನನಂ ಪರಂ (ಸ್ಮೃತಂ) ಇತಿ ।

**ಸ್ಮೃತಿಸಾರಸರ್ವಸ್ವೇ:–** ನಾಮ್ನಃ ಏಕಾದಶಾಹಾತ್ ಪ್ರಾಕ್ ಮೃತಶಿಶೋಃ ಖನನಮೇವ ಸಂಸ್ಕಾರಃ ।

**ಬ್ರಾಹ್ಮೇ:–** ವಸ್ತ್ರಾದ್ಯೈಃ ಭೂಷಿತಂ ಕೃತ್ವಾ ನಿಕ್ಷೇಪ್ತವ್ಯಂ ಚ ಕಾಷ್ಠವತ್ ।
ಖನಿತ್ವಾ ಶನಕೈಃ ಭೂಮೌ ಸದ್ಯಃ ಶೌಚಂ ವಿಧೀಯತೇ ॥

## ೫. ಬಾಲಮರಣ ವಿಚಾರ

**(ಜನನದಿಂದ ಆರು ತಿಂಗಳು ಅಥವಾ ದಂತೋತ್ಪತ್ತಿಯವರೆಗೆ)**

ಇಲ್ಲೊಂದು ವಿಶೇಷ ವಿಚಾರವನ್ನು ತಿಳಿಸಲಾಗುವುದು. ಹನ್ನೊಂದನೇ ದಿವಸದಿಂದ ಉಪನಯನದವರೆಗೂ ವಯಸ್ಸನ್ನು ಮತ್ತು ವಯೋಮಾನಕ್ಕೆ ಸರಿಯಾದ ಸಂಸ್ಕಾರಗಳ ಮುಖ್ಯ ಕಾಲವನ್ನೂ ಅನುಲಕ್ಷಿಸಿ ಆಶೌಚವನ್ನು ಹೇಳಿರುವುದು ಧರ್ಮಶಾಸ್ತ್ರದಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಮೂರು ವರ್ಷ ಅಥವಾ ಚೌಳಸಂಸ್ಕಾರ, ಗರ್ಭಾಷ್ಟಮ ವರ್ಷ ಅಥವಾ ಉಪನಯನ. ಒಬ್ಬ ಬಾಲಕನಿಗೆ ಉಪನಯನವಾಗದಿದ್ದರೂ ಗರ್ಭಾಷ್ಟಮ ವರ್ಷವು ಪ್ರಾರಂಭವಾಗಿದ್ದರೆ ಉಪನಯನ ಸಂಸ್ಕಾರ ಹೊಂದಿದವನಿಗೆ ಹೇಳಿದ ಆಶೌಚ ವಿಧಿಯನ್ನು ಅನುಸರಿಸಬೇಕೆಂಬುದು ಧರ್ಮಶಾಸ್ತ್ರದ ನಿಲುವು ಆಗಿರುತ್ತದೆ. ಈ ವಿಷಯವನ್ನು ಧರ್ಮಶಾಸ್ತ್ರ ಹೇಳುವ ವಿದ್ವಾಂಸರು ಲಕ್ಷ್ಯದಲ್ಲಿರಿಸಿಕೊಳ್ಳಬೇಕು.

ಹನ್ನೊಂದನೇ ದಿವಸದಿಂದ ಹಲ್ಲು ಮೂಡುವುದರೊಳಗೆ ಅಥವಾ ಆರು ತಿಂಗಳೊಳಗೆ ಶಿಶುವು (ಹೆಣ್ಣಾಗಲಿ ಅಥವಾ ಗಂಡಾಗಲಿ) ಮೃತವಾದರೆ ಆ ಶಿಶುವನ್ನು ಭೂಮಿಯಲ್ಲಿಯೇ ಹುಗಿಯಬೇಕು. (ದಫನ ಮಾಡಬೇಕು) ದಹನವನ್ನು ಮಾಡಬಾರದು. ಇಲ್ಲಿ ಭಿನ್ನೋದರ (ಮಲತಾಯಿಯ ಪೈಕಿ) ಅಣ್ಣ ತಮ್ಮಂದಿರಿಗೂ, ಸಹೋದರ ಅಣ್ಣ ತಮ್ಮಂದಿರಿಗೂ, ತಾಯಿ-ತಂದೆಯರಿಗೂ (ಮಲತಾಯಿಗೂ ಸಹ) ಸಂಪೂರ್ಣ ಹತ್ತು ರಾತ್ರಿ ಆಶೌಚವು, ಇತರ ಸಪಿಂಡದವರು ಆಶೌಚವನ್ನು ಬಳಸುವ ಅವಶ್ಯಕತೆ ಇಲ್ಲ. ಸ್ನಾನದಿಂದ ಶುದ್ಧಿ ಎಂದು ಹೇಳಿದೆ. ದಹನ ಮಾಡಿದರೆ ಸಪಿಂಡರು ಒಂದು ದಿನ ಆಶೌಚವನ್ನು ಬಳಸಬೇಕು ಎಂದು ಹೇಳಿದೆ.

---

**ಆಶೌಚಸಿದ್ಧಾಂತೇ-**

ಪರಂ ದಶಾಹಾದ್ದ್ವಿಜನೋದಯಾತ್ ಪ್ರಾಕ್ ಆಷಷ್ಠಮಾಸಾದಥವಾ ಮ್ರಿಯೇತ ।
ತನೂಭವೋ ವಾ ಯದಿ ಕನ್ಯಕಾ ವಾ ದಾಹೋಽಥವಾ ಸ್ಯಾತ್ ಖನನಂ ತದಾನೀಮ್ ॥

ಭಿನ್ನೋದರಸ್ಯಾಪಿ ಚ ಸೋದರಸ್ಯ ಭ್ರಾತುಶ್ಚ ಪಿತ್ರೋರಘಮತ್ರ ಪೂರ್ಣಮ್ ।
ಜ್ಞಾತೇಸ್ತು ದಾಹೇ ದಿನಮೇಕಮೇವ ಸದ್ಯಃ ಶುಚಿತ್ವಂ ಖನನೇ ಮತಂ ಸ್ಯಾತ್ ॥ ಇತಿ

**ತಾತ್ಪರ್ಯಬೋಧಿನೀ-**: ದಶಾಹಾತ್ಪರಂ ಆದಂತಜನನಾತ್ ಷಾಣ್ಮಾಸಾದರ್ವಾಗ್ವಾ ಪುತ್ರಃ ಕನ್ಯಾ ವಾ ಯದಿ ಮ್ರಿಯೇತ, ತಯೋಃ ದಹನಂ ಖನನಂ ವಾ ವಿಧೇಯಮ್ । ತತ್ರ ಭಿನ್ನೋದರಸಮಾನೋದರಯೋಃ ಭ್ರಾತ್ರೋಃ ಪಿತ್ರೋಶ್ಚ ಪೂರ್ಣಮೇವಾಶೌಚಮ್ । ಜ್ಞಾತೇಸ್ತು ದಹನೇ ಏಕಾಹಮ್, ಖನನೇ ತು ಸ್ನಾನಾಚ್ಛುದ್ಧಿಃ ॥ ಇತಿ ।

**ಶತಶ್ಲೋಕೀ-** ದಾಹೇಽಹಃ ಖನನೇ ಸದ್ಯಃ ದಂತೋತ್ಪತ್ತೇರಧಃ ಪರಮ್। (ಸಪಿಂಡಾನಾಮಿತಿ)

**ವ್ಯಾಘ್ರಪಾದಃ-** ಬಾಲೇ ಮೃತೇ ಸಪಿಂಡಾನಾಂ ಸದ್ಯಃ ಶೌಚಂ ವಿಧೀಯತೇ ।
ದಶಾಹೇನ್ಯೈವ ದಂಪತ್ಯೋಃ ಸೋದರಾಣಾಂ ತಥೈವ ಚ ॥

**ಅಖಂಡಾದರ್ಶೇ-** ಜ್ಞಾತೀನಾಂ ಸ್ನಾನಮೇವ ಬಾಲಮರಣೇ ।
ಮಾತಾಪಿತೃಸೋದರ- ಭಿನ್ನೋದರಾಣಾಮಪಿ ದಶಾಹಮಘಂ ಭವತಿ।

**ಪಿಂಗಲಗೃಹ್ಯೇ-** ಗರ್ಭಸ್ಥೇ ಪ್ರೇತೇ ಮಾತುರೇವ ಸ್ಯಾದ್ದಶಾಹಮಾಶೌಚಮ್ ।
ಜಾತೇ ಉಭಯೋಃ, ಕೃತೇ ನಾಮ್ನಿ, ಸೋದರಾಣಾಮಪಿ
ಭಿನ್ನೋದರಾಣಾಮಪ್ಯೇವಮೇವೇತಿ ।

**ಬೋಧಾಯನಗೃಹ್ಯೇ**– ದಂಪತೀ ದಶರಾತ್ರಂ ಸೂತಕಿನೌ ಭವತಃ । ಇತಿ।

**ವರದರಾಜೀಯೇ**– ಪ್ರಾಗ್ಬಾಲ್ಯಜನನೀಸಮಂ ದಿಶತು ತತ್ತೀತೋದಕಾದಿಕ್ರಿಯಾಮ್ । ಇತ್ಯಾದಿ ॥

## ೬. ಆರು ತಿಂಗಳ ನಂತರ ಮೂರು ವರ್ಷ ಅಥವಾ ಚೌಳ ಸಂಸ್ಕಾರದವರೆಗೆ

ಆರು ತಿಂಗಳ ನಂತರ ಅಥವಾ ಹಲ್ಲು ಮೂಡಿದ ನಂತರ ಮೂರು ವರ್ಷದ ಒಳಗೆ ಅಥವಾ ಚೌಳ ಸಂಸ್ಕಾರದ ಒಳಗೆ ಗಂಡು ಅಥವಾ ಹೆಣ್ಣು ಶಿಶುವು ಮೃತವಾದರೆ ದಹನವನ್ನು ಮಾಡಬಹುದು ಅಥವಾ ಗಂಗಾದಿ ಪುಣ್ಯ ನದಿಗಳಲ್ಲಿ ತ್ಯಾಗ ಮಾಡಬಹುದು ಅಥವಾ ಭೂಮಿಯಲ್ಲಿ ಹೂಳಬಹುದು. ಇಲ್ಲಿಯೂ ಸಹ ಹಿಂದಿನಂತೆ ಭಿನ್ನೋದರ ಸಹೋದರ ಅಣ್ಣ ತಮ್ಮಂದಿರು, ತಾಯಿ–ತಂದೆಯರು (ಮಲತಾಯಿಯೂ ಸಹ) ಸಂಪೂರ್ಣ ಆಶೌಚವನ್ನು ಬಳಸಬೇಕು. ಇತರ ಸಾಪಿಂಡ ಜನರು, ಗಂಡು ಶಿಶುವಾದರೆ ಒಂದು ದಿನ ಆಶೌಚವನ್ನು ಬಳಸಬೇಕು. ಹೆಣ್ಣು ಶಿಶುವಾದರೆ ದಹನ ತೀರ್ಥತ್ಯಾಗ ಮಾಡಿದರೆ ಸಜ್ಯೋತಿಕಾಲ ಆಶೌಚವನ್ನು ಬಳಸಬೇಕು. ಭೂಮಿಯಲ್ಲಿ ಹೂಳಿದರೆ ಸಪಿಂಡ ಜನರಿಗೆ ಸ್ನಾನದಿಂದ ಶುದ್ಧಿಯೆಂದು ತಿಳಿಯಬೇಕು. ಸಪಿಂಡಜನರಿಗೆ ಇಲ್ಲಿ ಇದುವೇ ವಿಶೇಷವಾಗಿದೆ. (ಯೋಚಿಸಿ ಶಾಸ್ತ್ರವನ್ನು ಹೇಳಬೇಕು.)

---

**ತಾತ್ಪರ್ಯ ಬೋಧಿನೀವ್ಯಾಖ್ಯಾ**:– ದಂತಜನನಾತ್ಪರಂ ಷಣ್ಮಾಸಾದ್ವಾ ಪರಂ ಆಚೌಳಾತ್ ಆತ್ರಿವರ್ಷಾದ್ವಾ ಪುತ್ರಕನ್ಯಯೋಃ ಮರಣೇ ದಾಹಃ ಗಂಗಾದೌ ತ್ಯಾಗಃ ಖನನಂ ವಾ ।

**ಯಾಜ್ಞವಲ್ಕ್ಯಃ**:– ಆದಂತಜನನಾತ್ ಸದ್ಯಃ ಆಚೌಳಾತ್ ನೈಶಿಕೀ ಸ್ಮೃತಾ ॥

**ಮನುಃ**:– ನೃಣಾಮಕೃತಚೌಳಾನಾಂ ಅಶುದ್ಧಿರ್ನೈಶಿಕೀ ಸ್ಮೃತಾ ॥

**ವಿಷ್ಣುಃ**:– ದಂತೇ ಜಾತೇ ತ್ವಕೃತಚೌಳೇ ತ್ವಹೋರಾತ್ರೇಣ ಶುದ್ಧಿಃ ॥ ಇತಿ

## ೭. ಸಜ್ಯೋತಿ ಶಬ್ದಾರ್ಥಃ

ಸೂರ್ಯೋದಯದಿಂದ ಸೂರ್ಯಾಸ್ತದವರೆಗಿನ ಅಥವಾ ಸೂರ್ಯಾಸ್ತದಿಂದ ಸೂರ್ಯೋದಯದವರೆಗಿನ ಕಾಲವು ಸಜ್ಯೋತಿ ಎನಿಸುವುದು. ಅಂದರೆ ಸೂರ್ಯೋದಯಕ್ಕೆ ಅಥವಾ ಆದರ ಭಾಗದಲ್ಲಿ ಆಶೌಚ ಬಂದರೆ ಸೂರ್ಯಾಸ್ತಕ್ಕೆ ಶುದ್ಧಿಯಾಗುವುದು. ಹಾಗೆಯೇ ಸೂರ್ಯಾಸ್ತ ಸಮಯಕ್ಕೆ ಅಥವಾ ರಾತ್ರಿಯ ಭಾಗದಲ್ಲಿ ಆಶೌಚ ಬಂದರೆ ಸೂರ್ಯೋದಯಕ್ಕೆ ಶುದ್ಧಿಯೆಂದು ತಿಳಿಯಬೇಕು.

**ತಾತ್ಪರ್ಯ ಬೋಧಿನೀ:–** ಸದ್ಯೋತಿಃ ಅಹ್ನಿಚೇತ್ ಆನಕ್ಷತ್ರದರ್ಶನಮ್ ॥
ರಾತ್ರೌ ಚೇತ್ ಆಸೂರ್ಯೋದಯಮಿತಿ ಜ್ಞೇಯಮ್ ॥

## ೮. ಚೌಳ ಸಂಸ್ಕಾರ ಅಥವಾ ಮೂರು ವರ್ಷದ ನಂತರ ಉಪನಯನದೊಳಗೆ ಅಥವಾ ಗರ್ಭಾಷ್ಟಮವರ್ಷದೊಳಗೆ ಮೃತ ವಿಚಾರ

ಚೌಳ ಸಂಸ್ಕಾರ ಅಥವಾ ಮೂರು ವರ್ಷದ ನಂತರ ಉಪನಯನದೊಳಗೆ ಅಥವಾ ಗರ್ಭಾಷ್ಟಮ ವರ್ಷದೊಳಗೆ ಬಾಲಕನು (ಕುಮಾರನು) ಮೃತಪಟ್ಟರೆ ಹಿಂದಿನಂತೆ ಭಿನ್ನೋದರ ಸಹೋದರ ಅಣ್ಣ ತಮ್ಮಂದಿರು, ತಾಯಿ–ತಂದೆಯರು (ಮಲತಾಯಿಯೂ ಸಹ) ಸಂಪೂರ್ಣ ಆಶೌಚವನ್ನು ಬಳಸಬೇಕು. ಇತರ ಸಪಿಂಡ ಜನರು ಮೂರು ರಾತ್ರಿ ಆಶೌಚವನ್ನು ಬಳಸಬೇಕು. ಎಂಟನೇ ವರ್ಷದಿಂದ ಎಲ್ಲರೂ (ಸಪಿಂಡರು, ಸೋದಕರು, ಏಕಾಹಿಗಳು) ತಮಗೆ ಉಕ್ತವಾದ ಪ್ರಕಾರ ಸಂಪೂರ್ಣ ಆಶೌಚವನ್ನು (ಸಪಿಂಡರು ಹತ್ತು ರಾತ್ರಿ, ಸೋದಕರು ಮೂರು ರಾತ್ರಿ, ಏಕಾಹಿಗಳು ಒಂದು ರಾತ್ರಿ) ಬಳಸಬೇಕು.

ಈ ರೀತಿಯು ಬಾಲಕನನ್ನು ದಹನ ಮಾಡಲೇ ಬೇಕು. ಗರ್ಭಾಷ್ಟಮವೆಂದರೆ ಆರು ವರ್ಷ ಮೂರು ತಿಂಗಳಾದ ನಂತರ ಏಳನೇ ವರ್ಷವೆಂದು ತಿಳಿಯಬೇಕು. ಗರ್ಭಾಷ್ಟಮ ವರ್ಷವು ಉಪನಯನದ ಮುಖ್ಯ ಕಾಲವೆಂದು ತಿಳಿಸಿರುವರು. ಆದರಿಂದ ಏಳು ವರ್ಷವೂ ಸಂಪೂರ್ಣ ಮುಗಿದಿದ್ದರೆ ಸಪಿಂಡಾದಿ ಜನರು ತಮಗೆ ಉಕ್ತವಾದ ರೀತಿ ಸಂಪೂರ್ಣ ಆಶೌಚವನ್ನು ಬಳಸಬೇಕು.

**ಆಶೌಚಸಿದ್ಧಾಂತೇ:–** ಚೌಳಾತ್ತ್ರಿವರ್ಷಾದಥವಾ ಪರಂ ಚೇತ್ ತಯೋರ್ಮೃತಿಸ್ತತ್ರ ತು ದಾಹ ಏವ ।
ಪುರೋಪನೀತೇರಥ ಸಪ್ತಮಾಬ್ದಾತ್ ಬಾಲೇ ಮೃತೇಽಘಂ ತ್ರಿದಿನಂ ಸನಾಭೇಃ ॥
ಪಿತ್ರೋರಪಿ ಭ್ರಾತೃಜನಸ್ಯ ಪೂರ್ಣಂ ಅಥೋಪನೀತೋಽನುಪನೀತಕೋ ವಾ ।
ಬಾಲೋ ಮೃತಃ ಸಪ್ತಮವರ್ಷಭಾಕ್ಚೇತ್ ಸರ್ವಸ್ಯ ಚ ಜ್ಞಾತಿಜನಸ್ಯ ಪೂರ್ಣಮ್ ॥

**ತಾತ್ಪರ್ಯಬೋಧಿನೀ:–** ಅಥ ಉಪನಯನಾತ್ ಸಪ್ತಮಾಬ್ದಾದ್ವಾ ಪ್ರಾಕ್ಚೇತ್ ತದಾ ದಾಹೋ ನಿಯತಃ ಉಪನಯನಾತ್ ಸಪ್ತಮಾಬ್ದಾದ್ವಾ ಪ್ರಾಕ್ಚೇತ್ ಮತ್ರ ಮರಣೇ ಜ್ಞಾತೇಃ ತ್ರಿದಿನಮಾಶೌಚಂ ತತಃ ಪರಂ ಪಿತ್ರೋಃ ಜ್ಞಾತೇಶ್ಚ ಪೂರ್ಣಮಾಶೌಚಮ್ ॥

**ಶತಶ್ಲೋಕೀ:–** ಚೌಳಾತ್ಪರಂ ತ್ರಿರಾತ್ರಂ ಸ್ಯಾತ್ ಸ್ವಜಾತ್ಯುಕ್ತಂ ತತಃ ಪರಂ ।

**ಮನುಃ:–** ನಿವೃತ್ತಚೌಳಕಾನಾಂ ತು ತ್ರಿರಾತ್ರಾಚ್ಛುದ್ಧಿರಿಷ್ಯತೇ ।

**ಯಾಜ್ಞವಲ್ಕ್ಯಃ**:- ತ್ರಿರಾತ್ರಾಮಾವ್ರತಾದ್ದೇಶಾತ್ ದಶರಾತ್ರಮತಃ ಪರಮ್ ।

**ಸ್ಮೃತಿಸಾರಸರ್ವಸ್ವೇ**:- ಗರ್ಭಾಷ್ಟಮೇಽಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಮ್ ।
ಕುಮಾರಸ್ಯಾಷ್ಟಮೇ ವರ್ಷೇ ಗರ್ಭಾಧಾನಾದಿವತ್ಸರಾತ್ ॥

"ಗರ್ಭಾಷ್ಟಮೇಷು ಬ್ರಾಹ್ಮಣಮ್" ಇತಿ ಮನುವಸಿಷ್ಠ- ಆಪಸ್ತಂಬಾದಿ ವಚನೈಃ ಸರ್ವಸ್ಯಾಪಿ ಗೃಹ್ಯಭೇದೇಽಪಿ ವಿಪ್ರಸ್ಯ ಗರ್ಭಾಷ್ಟಮಾಬ್ದಸ್ಯ ಉಪನಯನ ಮುಖ್ಯಕಾಲಾವಗತೇಃ ಪೂರ್ಣೇ ಸಪ್ತಮಾಬ್ದೇ ಅಕೃತೋಪನಯನೇ ಮೃತೇ ಸತಿ ಸಪಿಂಡಾನಾಂ ಪೂರ್ಣಾಶೌಚಂ ಭವತೀತಿ । ( ಜ್ಞೇಯಮ್)

## ೯. ಕನ್ನಿಕೆಯರ ಮರಣ ವಿಚಾರ

ಕನ್ನಿಕೆಯರು ಚೌಳ ಸಂಸ್ಕಾರ ಅಥವಾ ಮೂರು ವರ್ಷದ ನಂತರ ವಾಗ್ದಾನದೊಳಗೆ ಮೃತ ಪಟ್ಟರೆ ಭಿನ್ನೋದರ ಸಹೋದರ ಅಣ್ಣ ತಮ್ಮಂದಿರು, ತಾಯಿ-ತಂದೆಯರು ಸಂಪೂರ್ಣ ಆಶೌಚವನ್ನು ಬಳಸಬೇಕು. ಇತರ ಸಪಿಂಡಜನರು ಒಂದು ದಿನ ಆಶೌಚವನ್ನು ಬಳಸಬೇಕು. ಸೋದಕಾದಿಗಳಿಗೆ ಸ್ನಾನದಿಂದ ಶುದ್ಧಿಯಾಗುವುದು.

ವಾಗ್ದಾನದ ನಂತರ ವಿವಾಹದೊಳಗೆ ಮೃತ ಪಟ್ಟರೆ ಭಿನ್ನೋದರ ಸಹೋದರ ವರ್ಗದವರು ಮತ್ತು ತಾಯಿ-ತಂದೆಯರು ಸಹ ಸಂಪೂರ್ಣ ಆಶೌಚವನ್ನು ಬಳಸಬೇಕು. ಇತರ ಸಪಿಂಡದವರು ಮೂರು ರಾತ್ರಿ ಆಶೌಚವನ್ನು ಬಳಸಬೇಕು.

ಕನ್ನಿಕೆಗೆ ಎಂಟನೇ ವರ್ಷ ಪ್ರಾರಂಭವಾಗಿದ್ದರೆ ವಾಗ್ದಾನವಾಗದೇ ಇದ್ದರೂ ಸಹ ಸಪಿಂಡದವರು ಮೂರು ರಾತ್ರಿ ಆಶೌಚವನ್ನು ಬಳಸಬೇಕು.

ಕನ್ನಿಕೆಯು (ಋತುಮತಿ) ನೆರೆದು ಮಿಂದರೆ ವಾಗ್ದಾನ, ವಿವಾಹವಾಗದೇ ಇದ್ದರೂ ಸಹ ಎಲ್ಲ ಜನರು ತಮಗೆ ಉಕ್ತವಾದ ರೀತಿಯಲ್ಲಿ ಸಂಪೂರ್ಣ ಆಶೌಚವನ್ನು ಬಳಸಬೇಕು. ಭಿನ್ನೋದರ ಸಹೋದರ ಅಣ್ಣ ತಮ್ಮಂದಿರು, ತಾಯಿ-ತಂದೆಯರಿಗೆ (ಮಲತಾಯಿಯೂ) ಬಾಲ ಮರಣದಲ್ಲಿ ಹೇಳಿದಂತೆ ಸದಾ ಹತ್ತು ರಾತ್ರಿ ಆಶೌಚವನ್ನು ಬಳಸಬೇಕೆಂಬುದನ್ನು ನೆನಪಿನಲ್ಲಿಡಬೇಕು. ಕನ್ಯಕಾ ಆಶೌಚ ವಿಷಯದಲ್ಲಿ ಸ್ಮೃತಿಸಾರಸರ್ವಸ್ವದಲ್ಲಿ ವಿಸ್ತಾರ ವಿವರಣೆ ಇದೆ. ವಿಸ್ತಾರ ಭಯದಿಂದ ಇಲ್ಲಿ ಬರೆಯುವುದಿಲ್ಲ.

ಅಸಂಸ್ಕೃತಳು ೪೦-೫೦ ವರ್ಷಕ್ಕೆ ಮೃತಳಾದರೂ ಸಹ ಎಲ್ಲರೂ ಸಂಪೂರ್ಣ ಆಶೌಚವನ್ನು ಬಳಸಬೇಕು.

**ಶತಶ್ಲೋಕೀವ್ಯಾಖ್ಯಾ**:- ಚೌಳಾತ್ ಪ್ರಾಕ್ ಕನ್ಯಾಮೃತೌ ಸದ್ಯಃ ಶೌಚಮ್ ।
ಚೌಳಾದೂರ್ಧ್ವಂ ತ್ರಿವರ್ಷಾತ್ ಪರಂ ವಾ ವಾಗ್ದಾನಾತ್ ಪ್ರಾಕ್ ದಿನಮ್ ।

ವಾಗ್ದಾನಾತ್ ಪರಂ ವಿವಾಹಾತ್ ಪೂರ್ವಂ ತ್ರಿದಿನವತ್ । ತತ್ರೈವ ರಜಃಪ್ರಾದುರ್ಭಾವೇ ಸತಿ ಕನ್ಯಾ ಮೃತೌ ಪೂರ್ಣಮಾಶೌಚಮ್ । ದಶಾಹಜ್ಞಾತಿಷು ಇತಿ ಸರ್ವತ್ರ ಅನುಷಜ್ಯತೇ।

**ಆಶೌಚ ಸಿದ್ಧಾಂತೇ:–**
ಚೌಳಾತ್ ತ್ರಿವರ್ಷಾದಥವಾ ಪರಂ ವಾಗ್ದಾನಾತ್ಪುರಾಚೇನ್ಮ್ರಿಯತೇ ತು ಕನ್ಯಾ ।
ಜ್ಞಾತೇರ್ದಿನಂ ಪ್ರಾಕ್ ತ್ರಿದಿನಂ ವಿವಾಹಾತ್ ಪೂರ್ಣಂ ತು ಸಾ ದೃಷ್ಟರಜಸ್ವಲಾ ಚೇತ್ ॥

ಅವಾಕ್ಪ್ರದಾನಾಪ್ಯಯಿತಾಪ್ಯಮಾಬ್ದಾ ಕನ್ಯಾ ಮೃತೌ ಚೇತ್ತ್ರಿದಿನಂ ಸನಾಭೇಃ ।
ಭ್ರಾತ್ರೋಶ್ಚ ಪಿತ್ರೋರ್ವಿಷಯೇಷು ಚೈತತ್ ಶ್ಲೋಕದ್ವಯೋಕ್ತೇಷ್ವಪಿ ಪೂರ್ಣಮೇವ ॥

**ತಾತ್ಪರ್ಯಬೋಧಿನೀ:–** ಅಥ ಚೌಳಾತ್ತ್ರಿವರ್ಷಾದ್ವಾ ಪರಂ ವಾಗ್ದಾನಾತ್ ಪೂರ್ವಂ ಕನ್ಯಾಯಾಃ ಮೃತೌ ಜ್ಞಾತೇಃ ಏಕಾಹಮಾಶೌಚಮ್ । ವಾಗ್ದಾನಾತ್ ಪರಂ ವಿವಾಹಾತ್ ಪ್ರಾಕ್ ಮೃತೌ ಜ್ಞಾತೇಃ ತ್ರಿದಿನಂ ಜ್ಞೇಯಮ್ । ವಿವಾಹಾತ್ ಪ್ರಾಕ್ ದೃಷ್ಟರಜಸ್ಕಾಯಾಃ ಮರಣೇ ಜ್ಞಾತೇಃ ಪೂರ್ಣಮಾಶೌಚಮ್ । ಅತ್ರೋಕ್ತವಿಷಯೇಷು ಪೂರ್ವವತ್ ಭ್ರಾತುಃ ಭ್ರಾತೃಜನಸ್ಯ ಪಿತ್ರೋಶ್ಚ ಪೂರ್ಣಮಾಶೌಚಮಿತ್ಯವಗಂತವ್ಯಮ್ ಇತಿ ।

**ಶಂಖಃ:–** ಪಿತೃವೇಶ್ಮನಿ ಯಾ ನಾರೀ ರಜಃ ಪಶ್ಯತ್ಯಸಂಸ್ಕೃತಾ ।
ತಸ್ಯಾಂ ಮೃತಾಯಾಂ ನಾಶೌಚಂ ಕದಾಚಿದಪಿ ಶಾಮ್ಯತಿ ॥

**ಸ್ಮೃತಿಸಾರಸರ್ವಸ್ವೇ:–**ಸ್ವಜಾತ್ಯುಕ್ತಸಂಪೂರ್ಣಾಶೌಚಾನುಷ್ಠಾನಮಂತರೇಣ ತ್ರ್ಯಹಾನುಷ್ಠಾನಮಾತ್ರೇಣ ದತ್ತಾನೂಢರಜಸ್ವಲಾಮರಣಾಶೌಚಂ ನ ವಿರಮತೀತ್ಯರ್ಥಃ॥

## ೧೦. ವಾಗ್ದಾನದ ನಂತರ ವರವಿಷಯ ವಿಚಾರ

ವಾಗ್ದಾನದ ನಂತರ ವಿವಾಹದೊಳಗೆ ಕನ್ನಿಕೆಯು ಮೃತಪಟ್ಟರೆ ವರನು ಮತ್ತು ಅವನ ಸಪಿಂಡರೂ ಸಹ ಮೂರು ರಾತ್ರಿ ಆಶೌಚವನ್ನು ಬಳಸಬೇಕು. ಮೃತಳ ತಾಯಿ-ತಂದೆಯರು ಮತ್ತು ಅವಳ ತಂದೆಯ ಸಪಿಂಡರೂ ಸಹ ಮೂರು ರಾತ್ರಿ ಆಶೌಚವನ್ನು ಬಳಸಬೇಕೆಂದು ಹೇಳಿರುವರು. ವಾಗ್ದಾನವಾದ ಕನ್ನಿಕೆಯು ಮೃತಳಾದರೆ ವರನ ಗೋತ್ರವನ್ನು ಉಚ್ಚರಿಸಿಯೇ ಅವಳಿಗೆ ಮುಂದಿನ ಸಂಸ್ಕಾರ ಕರ್ಮಗಳನ್ನು ಆಚರಿಸಬೇಕು. ವಿವಾಹವು ಆಗಿದ್ದರೆ ಗಂಡನ ವಂಶಸ್ಥರಿಗೆ ಮಾತ್ರ ಸಂಬಂಧವೆಂದು ಹೇಳಿದೆ.

---

**ಬ್ರಾಹ್ಮೇ:–**ವಾಗ್ದಾನೇ ತು ಕೃತೇ ತ್ವತ್ರ ಜ್ಞೇಯಂ ಚೋಭಯತಸ್ತ್ರ್ಯಹಮ್ ।
ಪಿತುರ್ವರಸ್ಯ ಚ ತತೋ ದತ್ತಾನಾಂ ಭರ್ತುರೇವ ಹಿ ॥

**ಸ್ಮೃತ್ಯರ್ಥಸಾರೇ:-** ದತ್ತಾನೂಢಾ ಚ ಯಾ ಕನ್ಯಾ ಸಂಸ್ಕಾರ್ಯಾ ಭರ್ತೃಗೋತ್ರತಃ ।
ಉಭಯೋರ್ವರಯೋಶ್ಚೈವ ತ್ರಿರಾತ್ರಮಘಮಿಷ್ಯತೇ ॥

"ದತ್ತಾನಾಂ ಭರ್ತುರೇವ ಹಿ" ಇತ್ಯತ್ರ ವರಸಪಿಂಡಾನಾಂ ಭವತಿ, ನ ಪಿತೃಸಪಿಂಡಾನಾಮಿತಿ।

**ಆಶೌಚಸಿದ್ಧಾಂತೇ:-** ತ್ರಿರಾತ್ರಮೇಷಾಪಿ ಚ ಭರ್ತುರೇವ ಗೋತ್ರೇಣ ದಾಹ್ಯೇತಿ ಮತಂ ಮುನೀನಾಮ್ ॥

**ತಾತ್ಪರ್ಯಬೋಧಿನೀ:-** ವಾಗ್ದತ್ತಾಯಾಃ ಕನ್ಯಾಯಾಃ ವಿವಾಹಾತ್ಪ್ರಾಕ್ ಮರಣೇ ವರಸ್ಯ ಜ್ಞಾತೇಶ್ಚ ತ್ರಿರಾತ್ರಮಾಶೌಚಮ್ । ಸಾ ಚ ವರಗೋತ್ರೇಣೈವ ದಾಹ್ಯಾ ।

**ಸ್ಮೃತಿಸಾರಸರ್ವಸ್ವ:-** ಸ್ವಜಾತ್ಯುಕ್ತಮಾಶೌಚಂ ಸ್ಯಾನ್ಮೃತಕೇ ಸೂತಕೇ ತಥಾ ।
ಪಿತುರ್ವರಸ್ಯ ಚೋಭಯತಃ ಉಭಯೋಃ ಸಪಿಂಡಯೋಃ ॥

ತತೋ ದಾನಾನಂತರಂ ದತ್ತಾನಾಂ ಊಢಾನಾಂ ಭರ್ತುರೇವ, ಅತ್ರ ಭರ್ತುರಿತಿ ಉಪಲಕ್ಷಣಂ । ಭರ್ತೃಸಪಿಂಡಾನಾಂ ಚ ಸ್ವಜಾತ್ಯುಕ್ತಮಘಮ್ ।

**ಮರೀಚಿ:-** ವಾರಿಪೂರ್ವಂ ಪ್ರದತ್ತಾ ಯಾ ಯಾ ನೈವ ಪ್ರತಿಪಾದಿತಾ ।
ಅಸಂಸ್ಕೃತಾ ತು ಸಾ ಜ್ಞೇಯಾ ತ್ರಿರಾತ್ರಮುಭಯೋಃ ಸ್ಮೃತಮ್ ॥

**ಮನು:-** ಸ್ತ್ರೀಣಾಂ ಅಸಂಸ್ಕೃತಾನಾಂ ತು ತ್ರ್ಯಹಾಚ್ಛುದ್ಧ್ಯಂತಿ ಬಾಂಧವಾಃ। ಇತಿ।

**ವಿಷ್ಣು:-** ತ್ರಿರಾತ್ರಾತ್ತು ಭವೇಚ್ಛುದ್ಧಿಃ ಕನ್ಯಾಸ್ವಪಿ ವಿಧೀಯತೇ। (ವಾಗ್ದತ್ತೇ ವರಾದಯಃ ಇತ್ಯರ್ಥಃ)

## ೧೧. ಆಹಿತಾಗ್ನಿಗಳ ಮೃತ ವಿಚಾರ

ಶ್ರೌತಾಗ್ನಿಯನ್ನು ಇಟ್ಟಿರುವ ಗೃಹಸ್ಥರು (ಅಗ್ನಿಹೋತ್ರಿಗಳು) ಮೃತಪಟ್ಟರೆ ದಹನದಿವಸದಿಂದ ಆಶೌಚವನ್ನು ಬಳಸಬೇಕು. ಅಗ್ನಿಹೋತ್ರಿಗಳನ್ನು ಮೊದಲು ಅಮಂತ್ರಕವಾಗಿ ದಹಿಸಿ ನಂತರ ಹತ್ತು ದಿವಸದೊಳಗೆ ಸಮಂತ್ರಕವಾಗಿ ಸಂಸ್ಕಾರವನ್ನು ಪ್ರಾರಂಭಿಸಿದರೆ ಅವಶಿಷ್ಟ ಪೂರ್ವಾಶೌಚದಿಂದಲೇ ಶುದ್ಧಿಯಾಗುವುದು. ಮೊದಲು ಅಮಂತ್ರಕವಾಗಿ ದಹಿಸಿ ಹತ್ತು ದಿವಸಗಳ ನಂತರ ಯಾವ ಕಾಲದಲ್ಲಾದರೂ ಯಾವುದೇ ರೀತಿಯಿಂದಲೂ ಪುನಃ ಮಂತ್ರವತ್ (ಸಮಂತ್ರಕ) ಸಂಸ್ಕಾರವನ್ನು ಪ್ರಾರಂಭಿಸಿದರೆ ಕರ್ಮಾಂಗವಾಗಿ ಎಲ್ಲ ಜನರೂ ತಮಗೆ ಉಕ್ತವಾದ ರೀತಿಯಲ್ಲಿ ಸಂಪೂರ್ಣ ಆಶೌಚವನ್ನು ಬಳಸಬೇಕು.

ಅಗ್ನಿಹೋತ್ರಿಗಳ ಅಥವಾ ಅಗ್ನಿಯನ್ನು ಇಡದವರ ಈ ಎರಡೂ ವ್ಯಕ್ತಿಗಳ ಅಸ್ಥಿಸಂಚಯನವನ್ನು ದಹನದ ದಿವಸದಿಂದಲೇ ಎಣಿಸಿ, ನಾಲ್ಕನೇ ದಿವಸ ಅಥವಾ ಮೂರನೇ ದಿವಸ ನಡೆಸಬೇಕು. ಮುಂದಿನ ದಿನಗಳು ಗೌಣ ಕಾಲವೆಂದು

ತಿಳಿಯಬೇಕು. ಬ್ರಾಹ್ಮಣರಿಗೆ ನಾಲ್ಕನೇ ದಿವಸವು ಮುಖ್ಯ ಕಾಲ (ದಿವಸ) ವೆಂದು ತಿಳಿಸಿರುವರು.

ಮೃತಾಶೌಚಗಳಿಗೆ ಎರಡು ವಿಧವಾದ ನಿಮಿತ್ತಗಳುಂಟು. ಒಂದು ಮರಣ, ಇನ್ನೊಂದು ದಹನ. ಸಪಿಂಡಜನರಿಗೆ ಮರಣದಿಂದಲೂ, ದಾಹಕರ್ತೃವಿಗೆ ದಹನದಿಂದಲೂ ಎಣಿಸಿ ಆಶೌಚವನ್ನು ಶುದ್ಧಿ ಮಾಡಿಕೊಳ್ಳಬೇಕೆಂದು ಹೇಳಿರುವ ವಚನವು ಎಲ್ಲ ವಿದ್ವಾಂಸರನ್ನು ಕುತೂಹಲಕ್ಕೆ ಒಳಪಡಿಸುವುದು. ಎಲ್ಲ ವ್ಯಾಖ್ಯಾನಕಾರರು, ನಿಬಂಧಕಾರರು ಈ ವಚನವನ್ನು ಸಮನ್ವಯಗೊಳಿಸುವಲ್ಲಿ ಬಹಳ ಪರಿಶ್ರಮ ವಹಿಸಿರುವರೆಂದು ನಮ್ಮಲ್ಲಿಯ ಹಳೆಯ ತಲೆಮಾರಿನ ವಿದ್ವಾಂಸರು ಹೇಳಿರುವರು. ಆಧಾನಪೂರ್ವಕ ಮೂರೂ ಅಗ್ನಿಗಳನ್ನು (ಶ್ರೌತಾಗ್ನಿ) ಇಟ್ಟವರಿಗೆ ಆಹಿತಾಗ್ನಿಗಳೆಂದೂ, ಕೇವಲ ಒಂದೇ ಅಗ್ನಿ (ಔಪಾಸನಾಗ್ನಿ) ಅಥವಾ ಸ್ಮಾರ್ತಾಗ್ನಿಯನ್ನು ಇಟ್ಟವರಿಗೆ ಅನಾಹಿತಾಗ್ನಿಗಳೆಂದೂ ಶಾಸ್ತ್ರಕಾರರು ಹೇಳಿರುವರು. ಸ್ಮಾರ್ತಾಗ್ನಿಗಳು ಹೆಚ್ಚಾಗಿ ಸಮಿಧ ಸಮಾರೋಪ ಪಕ್ಷವನ್ನು ಆಶ್ರಯಿಸಿರುವುದರಿಂದ ಇವರಿಗೆ ಅನಾಹಿತಾಗ್ನಿಗಳೆಂದು ಹೇಳುವ ಪರಿಪಾಠವು ನಡೆದು ಬಂದಿದೆಯೆಂದು ತಿಳಿದು ಬರುತ್ತದೆ.

---

**ಆಶೌಚಸಿದ್ಧಾಂತೇ:–**
ಪರಂ ದಶಾಹಾದ್ಯದಿ ಯಜ್ವನಃ ಸ್ಯಾದ್ದಾಹೇ ಪುನರ್ದಾಹದಿನಂ ಗೃಹೀತ್ವಾ ।
ಜ್ಞಾತೇರಘಂ ಪೂರ್ಣಮ್ ಇತಿ ।

**ತಾತ್ಪರ್ಯಬೋಧಿನೀ:–** ಪೂರ್ವಂ ಅಸಂಸ್ಕೃತಸ್ಯ ಆಹಿತಾಗ್ನೇಃ ದಶಾಹಾತ್ಪರಂ ಮಂತ್ರವತ್ ದಾಹೇ ಜ್ಞಾತೇಃ ತತ್ಸಂಸ್ಕಾರದಿನಮಾರಭ್ಯ ಪೂರ್ಣಮಾಶೌಚಮ್ ಇತಿ॥

**ಧರ್ಮಸಿಂಧುಃ:–** ಮಂತ್ರವದ್ದಾಹಮಾರಭ್ಯ ತು ಪುತ್ರಾದಿಸಪಿಂಡಾನಾಂ ದುಹಿತೃದೌಹಿತ್ರಾದಿ ಭಿನ್ನಗೋತ್ರಾಣಾಂ ಚ ಆಶೌಚಂ ಭವತ್ಯೇವ । ನ ತ್ರತಿಕ್ರಾಂತನಿಮಿತ್ತಕ ಆಶೌಚಾಭಾವೋ ವಾ ತತ್ ಹ್ರಸ್ವೋ ವಾ । ಅತ ಏವ ಆಹಿತಾಗ್ನೇಃ ಪರ್ಣಶರದಾಹೇಽಪಿ ದಶಾಹಮೇವ ದೇಶಾಂತರೇ ಕಾಲಾಂತರೇಷ್ವಪಿ ಸಿಧ್ಯತಿ ಇತಿ ।

**ಪೈಠೀನಸಿ:–** ಅನಗ್ನಿಮತ ಉತ್ಕ್ರಾಂತೇಃ ಆಶೌಚಂ ಹಿ ಸ್ವಜಾತಿಷು ।
ದಾಹಾದಗ್ನಿಮತೋ ವಿದ್ಯಾತ್ ವಿದೇಶಸ್ಥೇ ಮೃತೇ ಸತಿ ॥

**ಅಂಗಿರಾಃ :–** ಅನಗ್ನಿಮತ ಉತ್ಕ್ರಾಂತೇಃ ಸಾಗ್ನೇಃ ಸಂಸ್ಕಾರಕರ್ಮಣಃ ।
ಶುಚಿಃ ಸಂಚಯನಂ ದಾಹಾತ್ ಮೃತಾಹಸ್ತು ಯಥಾವಿಧಿ ॥

**ಸ್ಮೃತ್ಯಂತರೇ:–** ಅನಗ್ನೇರ್ಮರಣಾತ್ಸಾಗ್ನೇಃ ಆಶೌಚಂ ದಾಹತಃ ಪರಮ್ ।
ತಯೋಃ ಸಂಚಯನಂ ದಾಹಾತ್ ಮೃತಾಹಸ್ತು ತಿಥಿಃ ಸ್ಮೃತಾ ॥

**ತಾತ್ಪರ್ಯಬೋಧಿನೀ:–** ಅನಾಹಿತಾಗ್ನೇಃ ಮೃತದಿನಮಾರಭ್ಯೈವ ಆಶೌಚಗ್ರಹಣಮ್ ।
ಆಹಿತಾಗ್ನೇಸ್ತು ದಾಹದಿನಮಾರಭ್ಯೈವ ಸಂಚಯನ ದಿನಾಂತಮ್ ।
ಉಭಯೋರಪಿ ದಹನದಿನಮಾರಭ್ಯೈವ ಕುರ್ಯಾತ್ ಇತಿ ।

**ಸ್ಮೃತಿಸಾರಸರ್ವಸ್ವೇ:–** ಸಾಗ್ನ್ಯನಗ್ನ್ಯೋರುಭಯೋರಪಿ ಅಸ್ಥಿ ಸಂಚಯನಂ ದಾಹಾದೇವ ತೃತೀಯಚತುರ್ಥಾದಿ ದಿವಸಗ್ರಹಣಮಿತಿ ಬೋದ್ಧವ್ಯಮ್ ಇತಿ ।

**ಗಾರುಡೇ:–** ಚತುರ್ಥೇ ಸಂಚಯಃ ಕಾರ್ಯಃ ಸಾಗ್ನಿಕೈಶ್ಚ ನಿರಗ್ನಿಕೈಃ
ದ್ವಿತೀಯೇಽಹ್ನಿ ತೃತೀಯೇ ವಾ ಕರ್ತವ್ಯಂ ವಾ ಅವಿರೋಧತಃ ॥

**ಶತಶ್ಲೋಕೀ ವ್ಯಾಖ್ಯಾಯಾಂ:–**
ಚತುರ್ಥೇ ಸಂಚಯಃ ಕಾರ್ಯಃ ಚತುರ್ಥೇಽಹನಿ ವಿಪ್ರಸ್ಯ ।
ಚತುರ್ಥೇಽಹನಿ ಕರ್ತವ್ಯಂ ಅಸ್ಥಿ ಸಂಚಯನಂ ನೃಪ ॥

"ಚತುರ್ಥೇಽಹನಿ ವಿಪ್ರಾಣಾಮ್" ಇತ್ಯಾದಿ ವಚನೈಃ ಅಸ್ಥಿಸಂಚಯನಸ್ಯ ಚತುರ್ಥೇಽಹನಿ ಕರ್ತವ್ಯತ್ವವಿಧಾನಾತ್ ಅಥವಾ (ಚತುರ್ಥೇ) ಸಂಚಯನಾದಸ್ಥ್ನಾಮ್ ಇತಿ ಮನುನಾ ಅಸ್ಥಿಸಂಚಯನೇ ಚತುರ್ಥದಿವಸಸ್ಯೈವ ಉಪಲಕ್ಷಿತತ್ವಾಚ್ಚ ॥ ವಿಪ್ರಸ್ಯ ಚತುರ್ಥದಿನಂ ಮುಖ್ಯಕಾಲಃ ಇತ್ಯವಗಮ್ಯತೇ ॥

**ಸ್ಮೃತ್ಯಂತರೇ:–** ಮೃತಾಶೌಚನಿಮಿತ್ತೇ ದ್ವೇ ಮರಣಂ ದಹನಂ ತಥಾ ।
ಜ್ಞಾತೀನಾಂ ಮರಣಾದೇವ ದಹನಾತ್ ದಾಹಕಸ್ಯ ತು ॥

## ೧೨. ಅನಾಹಿತಾಗ್ನಿಗಳ ಮೃತಿ ವಿಚಾರ

ಶ್ರೌತಾಗ್ನಿಯನ್ನು ಇಡದಿರುವ ಗೃಹಸ್ಥರು (ಏಕಾಗ್ನಿ ಅಥವಾ ಸ್ಮಾರ್ತಾಗ್ನಿಗಳು) ಮೃತಪಟ್ಟರೆ, ಮರಣದ ದಿವಸದಿಂದಲೇ ಎಲ್ಲರೂ ಆಶೌಚವನ್ನು ಬಳಸಬೇಕು. ಅಸ್ಥಿ ಸಂಚಯವನ್ನು ದಹನದಿವಸದಿಂದಲೇ ಎಣಿಸಿ, ಆ ಕರ್ಮವನ್ನು ನಾಲ್ಕನೇ ದಿವಸ ಅಥವಾ ಮೂರನೇ ದಿವಸ ನಡೆಸಬೇಕು. ಅಗ್ನಿ ಇಡದಿರುವ (ಅನಾಹಿತಾಗ್ನಿ) ಗೃಹಸ್ಥರನ್ನು ಮೊದಲು (ಅಮಂತ್ರಕ) ಲೌಕಿಕ ರೀತಿಯಿಂದ ದಹಿಸಿ, ನಂತರ ಹತ್ತು ದಿವಸದೊಳಗೆ ಮಂತ್ರವತ್ತಾಗಿ (ಸಮಂತ್ರಕ) ಸಂಸ್ಕಾರವನ್ನು ಪ್ರಾರಂಭಿಸಿದರೆ ಪೂರ್ವಾಶೌಚದ ಅವಶಿಷ್ಟ ದಿವಸದಿಂದಲೇ ಶುದ್ಧಿಯಾಗುವುದು. ಇಲ್ಲಿಯ ಹೆಚ್ಚಿನ ನಿರ್ಣಯಗಳನ್ನು ಮುಂದಿನ ಅಸ್ಥಿ ಮತ್ತು ಶಾಖಾ ಸಂಸ್ಕಾರಗಳಲ್ಲಿ ನೋಡಿಕೊಳ್ಳಬೇಕು.

## ೧೩. ಅಸ್ಥಿ ಮತ್ತು ಶಾಖಾ ಸಂಸ್ಕಾರಗಳಲ್ಲಿ ಆಶೌಚ ವಿಚಾರ

ಮರಣದಿಂದ ಹತ್ತು ದಿವಸಗಳ ಒಳಗೇ ಅಸ್ಥಿದಾಹಪೂರ್ವಕ ಸಂಸ್ಕಾರವನ್ನೂ ಪ್ರಾರಂಭಿಸಿದರೆ, ಅವಶಿಷ್ಟ ಆಶೌಚದಿಂದಲೇ ಶುದ್ಧಿಯಾಗುವುದು.

ಹತ್ತು ದಿವಸಗಳ ನಂತರ ಅಥವಾ ಕಾಲಾಂತರದಲ್ಲಿ ಅಸ್ಥಿದಾಹಪೂರ್ವಕ ಕ್ರಿಯೆಯನ್ನು ಪ್ರಾರಂಭಿಸಿದರೆ ಮರಣ ಕಾಲದಲ್ಲಿ ಆಶೌಚವನ್ನು ಬಳಸದೇ ಇರುವ ಸಪಿಂಡ ಜನರು ಹತ್ತು ರಾತ್ರಿ ಆಶೌಚವನ್ನು ಬಳಸಬೇಕು. ಹಿಂದಿನ ಮರಣ ಕಾಲದಲ್ಲಿ ಆಶೌಚವನ್ನು ಬಳಸಿ ಉದಕಾಂಜಲಿಯನ್ನು ಕೊಡದಿರುವ ಸಪಿಂಡರು ಒಂದು ದಿನ ಆಶೌಚವನ್ನು ಬಳಸಬೇಕು. ಹಿಂದಿನ ಮರಣ ಕಾಲದಲ್ಲಿ ಆಶೌಚವನ್ನು ಬಳಸಿ ಉದಕಾಂಜಲಿ ಪ್ರದಾನವನ್ನೂ ಸಹ ನಡೆಸಿರುವ ಸಪಿಂಡ ಜನರು ಈ ಎರಡನೇ ಸಲ ಆಶೌಚವನ್ನು ಬಳಸುವ ಅವಶ್ಯಕತೆ ಇರುವುದಿಲ್ಲ. ಮೃತಪಟ್ಟ ಹತ್ತು ದಿವಸದೊಳಗೇ ಪರ್ಣಶರದಾಹ (ಶಾಖಾ ಸಂಸ್ಕಾರ) ಪೂರ್ವಕ ಕ್ರಿಯೆಯನ್ನು ಪ್ರಾರಂಭಿಸಿದರೆ ಪೂರ್ವ ಮರಣಾಶೌಚದಿಂದಲೇ ಶುದ್ಧಿಯಾಗುವುದು. ಹತ್ತು ದಿವಸಗಳ ನಂತರ ಅಥವಾ ಕಾಲಾಂತರದಲ್ಲಿ ಪರ್ಣಶರದಾಹ (ಶಾಖಾ ಸಂಸ್ಕಾರ) ಪೂರ್ವಕ ಕ್ರಿಯೆಯನ್ನು ಪ್ರಾರಂಭಿಸಿದರೆ ಮೊದಲು ಆಶೌಚವನ್ನು ಬಳಸದೇ ಇರುವ ಸಪಿಂಡಕರು ಮೂರು ರಾತ್ರಿ ಆಶೌಚವನ್ನು ಬಳಸಬೇಕು. ಮರಣ ಕಾಲದಲ್ಲಿ ಆಶೌಚವನ್ನು ಬಳಸಿ ಉದಕಾಂಜಲಿಯನ್ನು ಕೊಡದಿರುವ ಸಪಿಂಡರು ಒಂದು ದಿನ ಆಶೌಚವನ್ನು ಬಳಸಬೇಕು. ಮರಣ ಕಾಲದಲ್ಲಿ ಆಶೌಚವನ್ನು ಬಳಸಿ ಉದಕಾಂಜಲಿಯನ್ನು ಸಹ ಸಲ್ಲಿಸಿರುವ ಸಪಿಂಡ ಜನರು ಈ ಎರಡನೇ ಸಲ ಆಶೌಚವನ್ನು ಬಳಸುವ ಅವಶ್ಯಕತೆ ಇರುವುದಿಲ್ಲ. ಈ ವ್ಯವಸ್ಥೆಯು ಕೇವಲ ಸಪಿಂಡಾದಿಗಳಿಗೆ ಮಾತ್ರ ಸೀಮಿತವಾಗಿರುತ್ತದೆ.

"ಜ್ಞಾತಿಗಳಿಗೆ ಸೂತಕವಿಲ್ಲವು" ಎಂಬ ವಚನವು ಸಂವತ್ಸರದ ನಂತರ ಪ್ರೇತಕರ್ಮ ನಡೆಸಿದರೆ ಎಂದು ತಿಳಿದುಕೊಳ್ಳಬೇಕು. ಮರಣ ಕಾಲದಲ್ಲಿ ಆಶೌಚವನ್ನು ಸ್ವೀಕರಿಸಿದ ಸಪಿಂಡರು ಸಂವತ್ಸರದ ನಂತರ ಪ್ರೇತ ಕರ್ಮವನ್ನು ಪ್ರಾರಂಭಿಸಿದರೆ ಸ್ನಾನದಿಂದ ಶುದ್ಧಿ ಎಂದು ಹೇಳಿದೆ. ಆದರೆ ಮುಖ್ಯ ಕರ್ತೃಗಳಾದ ಔರಸಪುತ್ರರು ತಮ್ಮ ತಾಯಿ-ತಂದೆಯರ ಆಶೌಚವನ್ನು ಸದಾ ಹತ್ತು ರಾತ್ರಿ ಬಳಸಲೇಬೇಕು ಎಂದು ಶಾಸ್ತ್ರಕಾರರು ಹೇಳಿರುವರು.

---

**ಆಶೌಚ ಸಿದ್ಧಾಂತೇ:**-ಶತ್ರಾಸ್ಥಿದಾಹೇ ಪ್ರಥಮಂ ಯದಿ ಸ್ಯಾದಘಾಗ್ರಹಃ ಪೂರ್ಣಮಘಂ ಗ್ರಹೇಽಪಿ ।
ಜ್ಞಾತೇರದತ್ತೋದಕಿನಸ್ತ್ರಿರಾತ್ರಂ ದತ್ತೋದಕಸ್ಯಾಸ್ತಿ ಹಿ ನಾಘಲೇಶಃ ॥
ಪ್ರತ್ಯಾಕೃತೇರ್ದಾಹವಿಧಾವಘಸ್ಯಾಗ್ರಹೇ ತ್ರ್ಯಹಂ ತದ್ಗ್ರಹಣೇಽಪ್ಯದತ್ತೇ ।
ಜಲೇ ದಿನಂ ದತ್ತಜಲಸ್ಯ ನಾಘಂ ಸದಾ ಸುತಾನಾಂ ತು ದಶಾಹಮೇವ ॥

**ತಾತ್ಪರ್ಯಬೋಧಿನೀ:**-ಅನಾಹಿತಾಗ್ನೇಃ ದಶಾಹಾತ್ಪರಂ ಅಸ್ಥಿದಾಹೇ ಪೂರ್ವಮಗೃಹೀತಾಶೌಚಸ್ಯ ಜ್ಞಾತೇಃ ತತ್ಪ್ರಭೃತಿ ದಶಾಹಮಾಶೌಚಮ್ । ಗೃಹೀತಾಶೌಚಸ್ಯ ಜ್ಞಾತೇಃ ಅದತ್ತೋದಕಸ್ಯ ತ್ರಿರಾತ್ರಮಾಶೌಚಮ್ । ತಸ್ಯೈವ ದತ್ತೋದಕಸ್ಯ ತು ಪುನಃ ನಾಶೌಚಮನುವರ್ತತೇ । ಪರ್ಣಶರದಾಹೇ

ಅಗೃಹೀತಾಶೌಚಸ್ಯ ಜ್ಞಾತೇಃ ತ್ರಿದಿನಂ, ಗೃಹೀತಾಶೌಚಸ್ಯ ಪುನಃ ಅದತ್ತೋದಕಸ್ಯ ಏಕದಿನಂ, ದತ್ತೋದಕಸ್ಯ ತು ನಾಸ್ತ್ಯಾಶೌಚಮ್ । ಉಕ್ತಪಕ್ಷೇಷು ಸರ್ವತ್ರಾಪಿ ಸುತಾನಾಂ ದಶಾಹಮೇವ ಇತಿ ।

**ದೇವಲಃ ಸ್ಮೃತ್ಯಂತರೇ:–** ದಗ್ಧ್ವಾಗ್ನಿ ಪಿತ್ರೋಃ ಪುತ್ರಸ್ತು ದಶಾಹಂ ಸೂತಕೀ ಭವೇತ್ ।
ತಯೋಃ ಪ್ರತಿಕೃತಿಂ ದಗ್ಧ್ವಾ ತ್ರಿರಾತ್ರಮಶುಚಿರ್ಭವೇತ್ ॥

**ಸಂಗ್ರಹೇ:–** ಅಸಪಿಂಡಮೃತೌ ಕುರ್ಯಾತ್ ತ್ರಿರಾತ್ರೇಣೋದಕಕ್ರಿಯಾ ।
ದಶಾಹಾತ್ ಪಿಂಡದಾನಂ ಸ್ಯಾತ್ ಮಾತಾಪಿತ್ರೋರ್ವಿಶೇಷತಃ ॥

**ಸ್ಮೃತಿಸಾರಸರ್ವಸ್ವೇ:–** ಅತ್ರ ಉದಕಕ್ರಿಯಾ ಶಬ್ದೇನ ಆಶೌಚಮಪ್ಯುಚ್ಯತೇ । "ಉದಕಕ್ರಿಯಾಶೌಚಂ"ಇತಿ ವಸಿಷ್ಠೇನ ತಯೋಃ ಸಮಾನಯೋಗಕ್ಷೇಮತ್ವಸ್ಮರಣಾತ್। ಇತಿ ।

**ಸ್ಮೃತ್ಯಂತರೇ:–** ಸಂಸ್ಕೃತಾಗ್ನೌ ದಹೇತ್ ಪಶ್ಚಾತ್ ದಶರಾತ್ರಂ ತು ಸೂತಕಮ್ ।
ಇತರೇಷಾಂ ತ್ರಿರಾತ್ರಂ ಸ್ಯಾತ್ ಜ್ಞಾತೀನಾಮಪಿ ಸೂತಕಮ್ ॥

**ಸ್ಮೃತಿಸಾರಸರ್ವಸ್ವೇ:–** ಪ್ರಾಗ್ಗೃಹೀತಾಶೌಚಾನಾಂ ಜ್ಞಾತೀನಾಂ ಸೂತಕಂ ದಶಾಹಮ್ ।
ಇತರೇಷಾಂ ಗೃಹೀತಾಶೌಚಾನಾಂ ತೇಷಾಂ ತ್ರಿರಾತ್ರಮ್ ॥

॥ ತೃತೀಯ ನಿರ್ಣಯವು ಮುಗಿಯಿತು ॥

# ಅಥ ಚತುರ್ಥ ನಿರ್ಣಯಃ

## ಅತಿಕ್ರಾಂತಾಶೌಚ (ಕಳೆದು ಹೋದ ಆಶೌಚ) ವಿಚಾರ

### ೧. ಜನನಾತಿಕ್ರಾಂತಾಶೌಚ

ಜನನಾಶೌಚದಲ್ಲಿ ಅತಿಕ್ರಾಂತಾಶೌಚವನ್ನು ಯಾರೂ ಕೂಡ ಬಳಸುವ ಆವಶ್ಯಕತೆ ಇಲ್ಲ. ಯಾಕೆಂದರೆ ಹತ್ತು ರಾತ್ರಿಯ ನಂತರ ನಿಮಿತ್ತವೇ ಸಂಪೂರ್ಣ ಶುದ್ಧಿಯಾಗುವುದು. ಮರಣದಲ್ಲಿ ನಿಮಿತ್ತವು ಒಂದು ವರ್ಷ ಪರ್ಯಂತ ಇರುತ್ತದೆ ಎಂದು ತಿಳಿಯಬೇಕು. ಜನನದ ಹತ್ತು ದಿವಸದೊಳಗೆ ವಾರ್ತೆ ಕೇಳಿದರೆ, ಅವಶಿಷ್ಟದಿವಸ ಆಶೌಚವನ್ನು ಬಳಸಿದರೆ ಶುದ್ಧಿಯಾಗುವುದು.

---

**ಶತಕೇ:**– ಪಿತುಃ ಸ್ನಾನಂ ತದನ್ಯೇಷಾಂ ನ ಚ ತತ್ಸೂತಕಾತ್ಯಯೇ ।

**ಸ್ಮೃತಿಸಾರಸರ್ವಸ್ವೇ :**– ಪಿತುರೇವ ಸ್ನಾನಂ ಪಿತೃವ್ಯತಿರಿಕ್ತ ತತ್ಸಪಿಂಡಾನಾಂ ತತ್ಸ್ನಾನಮಪಿ ನಾಸ್ತಿ ॥

**ಮನುಃ:**– ನಿರ್ದಶಂ ಜ್ಞಾತಿಮರಣಂ ಶ್ರುತ್ವಾ ಪುತ್ರಸ್ಯ ಜನ್ಮ ಚ ।
ವಾಸಸಾ ಜಲಮಾಪ್ಲುತ್ಯ ಶುದ್ಧೋ ಭವತಿ ಮಾನವಾಃ ॥

**ದೇವಲಃ:**– ನಾಶೌಚಂ ಪ್ರಸವಸ್ಯಾಸ್ತಿ ವ್ಯತೀತೇಷು ದಿನೇಷು ತು ।

**ಧರ್ಮಸಿಂಧುः:**– ಅತ್ರ ಜನನಾಽಶೌಚೇ ಅತಿಕ್ರಾಂತಾಶೌಚಂ ನಾಸ್ತಿ।
ಪಿತುಃ ಸ್ನಾನಮಾತ್ರಂ ತತ್ರಾಪಿ ಭವತಿ ॥

**ಆಶೌಚಸಿದ್ಧಾಂತೇ:**– ಜನ್ಮನ್ಯತಿಕ್ರಾಂತಮಘಂ ನ ಕಸ್ಯಾಪ್ಯಾಪ್ಲಾವಮಾತ್ರೇಣ ಪಿತುಸ್ತು ಶುದ್ಧಿಃ ॥

**ತಾತ್ಪರ್ಯಬೋಧಿನೀ:**– ಜನನೇ ಅತಿಕ್ರಾಂತಾಽಶೌಚಂ ಕಸ್ಯಾಪಿ ನಾಸ್ತಿ ।
ತತ್ರಾಪಿ ಪಿತುಸ್ತು ಸ್ನಾನಾಚ್ಛುದ್ಧಿರಿತ್ಯವಗಂತವ್ಯಾ ॥

### ೨. ಮರಣಾತಿಕ್ರಾಂತಾಶೌಚ (ವಿಚಾರ)

ಮರಣ ದಿವಸದಿಂದ ಹತ್ತು ರಾತ್ರಿಯೊಳಗೆ ವಾರ್ತೆ ಕೇಳಿದರೆ ಸಪಿಂಡರಿಗೆ ಅವಶಿಷ್ಟ ಮೃತಾಶೌಚವನ್ನು ಬಳಸಿದರೆ ಶುದ್ಧಿಯಾಗುವುದು.

ತಾಯಿ ತಂದೆಯರ ಮರಣದಲ್ಲಿ ಮಕ್ಕಳು ಅಸ್ಥಿಸಂಚಯನದೊಳಗೆ ವಾರ್ತೆ ಕೇಳಿದರೆ ಅಥವಾ ನಾಲ್ಕು ದಿನದೊಳಗೆ ವಾರ್ತೆ ಕೇಳಿದರೆ ಅವಶಿಷ್ಟ ದಿವಸದಿಂದಲೇ ಶುದ್ಧಿಯಾಗುವುದು.

ಸಂಚಯನ ಅಥವಾ ನಾಲ್ಕು ದಿವಸಗಳ ನಂತರ ತಾಯಿ ತಂದೆಯವರ ಮರಣ ವಾರ್ತೆ ಗೊತ್ತಾದರೆ ಮಕ್ಕಳು ವಾರ್ತಾಶ್ರವಣದ ದಿವಸದಿಂದ ಹತ್ತು ರಾತ್ರಿ ಆಶೌಚವನ್ನು ಪೃಥಕ್ಕಾಗಿ ಬಳಸಬೇಕು. ನಾಲ್ಕನೇ ದಿವಸವು ಅಸ್ಥಿಸಂಚಯನದ ಮುಖ್ಯ ಕಾಲವೆಂದು ಹಿಂದೆ ಆಹಿತಾಗ್ನಿಮೃತಿ ವಿಚಾರದಲ್ಲಿ ತಿಳಿಸಿದೆ.

ಪುತ್ರನು, ಮುಖ್ಯಕರ್ತೃವು ಆತ್ಮಜನು ಎಂಬ ಏಕವಚನ ಪದವನ್ನು ಬಳಸಿರುವುದರಿಂದ (ಜೇಷ್ಠ ಪುತ್ರನು) ಹಿರೇ ಮಗನು ಮಾತ್ರ ಸಂಚಯನದ ಅಥವಾ ನಾಲ್ಕು ದಿನಗಳ ನಂತರ ವಾರ್ತೆ ಕೇಳಿದರೆ, ಪ್ರಥಕ್ ಹತ್ತು ದಿವಸ ಆಶೌಚವನ್ನು ಬಳಸಬೇಕು.

ಕನಿಷ್ಠರಿಗೆ (ತಮ್ಮಂದಿರಿಗೆ) ಈ ವಿಧಿಯು ಸಂಬಂಧಿಸುವುದಿಲ್ಲವೆಂದು ಕೆಲವರು ಹೇಳುವರು. ಆದರೆ, ಅಣ್ಣ ತಮ್ಮ ಇಬ್ಬರೂ ತಂದೆಗೆ ಮಕ್ಕಳೇ ಆದ್ದರಿಂದ ಈ ಮೇಲಿನ ನ್ಯಾಯವನ್ನು ಇಬ್ಬರಿಗೂ ಅನ್ವಯಿಸಬೇಕೆಂದು ಶಿಷ್ಟರು ಹೇಳುವರು.

ಜೇಷ್ಠಪುತ್ರನು ದಹನಾದಿ ಕರ್ಮಗಳನ್ನು ಪ್ರಾರಂಭಿಸಿದ್ದರೆ, ಕನಿಷ್ಠರು ಹತ್ತು ದಿವಸದೊಳಗೆ ಯಾವಾಗ ಬಂದು ಸೇರಿಕೊಂಡರೂ ಆ ತಮ್ಮಂದಿರಿಗೆ ಪೂರ್ವ ಮರಣಾಶೌಚವು ಅವಶಿಷ್ಟ ದಿವಸದಿಂದಲೇ ಶುದ್ಧಿಯಾಗುವುದು ಎಂದು ಮತ್ತೆ ಕೆಲವು ವಿದ್ವಾಂಸರು ಹೇಳುವರು. ಈ ವಿಷಯವು ತಾಯಿ ತಂದೆಯವರಿಗೆ ಸಂಬಂಧಿಸಿದ ಅತಿ ಸೂಕ್ಷ್ಮ ವಿಚಾರವಾದ್ದರಿಂದ ದೇಶಾಚಾರದಂತೆ ವ್ಯವಸ್ಥೆ ಮಾಡಿಕೊಳ್ಳುವುದು ಯುಕ್ತವಾಗಿದೆ.

ಜೇಷ್ಠ ಮಗನಿಗೆ (ಹಿರೇ ಮಗನಿಗೆ) ನಿಸ್ಸಂಶಯವಾಗಿ ಸಂಚಯನದೊಳಗೆ ವಾರ್ತೆ ಕೇಳಿದರೆ ಅವಶಿಷ್ಟ ದಿವಸದಿಂದಲೂ, ನಂತರ ವಾರ್ತೆ ಕೇಳಿದರೆ ಹತ್ತು ರಾತ್ರಿ ಆಶೌಚವನ್ನು ಬಳಸಬೇಕೆಂಬುದರಲ್ಲಿ ಎರಡು ಮಾತಿಲ್ಲ. ಆದರೆ, ಈ ನ್ಯಾಯವು ಕನಿಷ್ಠರಿಗೂ (ತಮ್ಮಂದಿರಿಗೂ) ಹೊಂದುವದೇ? ಎಂಬ ಬಗ್ಗೆ ಚಿಂತನೆಯಾಗಬೇಕಿದೆ. (ಇದು ನನ್ನ ಅಭಿಪ್ರಾಯ) ಜ್ಯೇಷ್ಠ ಕನಿಷ್ಠರ (ಅಣ್ಣ ತಮ್ಮಂದಿರ) ವ್ಯವಸ್ಥೆ ವಿಷಯವನ್ನು ಮುಂದೆ ಬೇರೆ ಬೇರೆಯಾಗಿ ವಿವರಿಸಿದೆ. ಅಲ್ಲಿ ನೋಡಿ ತಿಳಿದುಕೊಳ್ಳಬೇಕಾಗಿ ವಿನಂತಿಸುವೆ.

---

**ಆಶೌಚಸಿದ್ಧಾಂತೇ** :– ಶಾವಂ ಪರೋಕ್ಷಂ ಯದಿ ಸೂತಕಂ ವಾ
ಮಧ್ಯೇ ದಶಾಹೇ ಶ್ರುತಿಗೋಚರಂ ಚೇತ್ ।
ಶಿಷ್ಟಾಹಮೇವಾಘಮಥಾತ್ಮಜಸ್ಯಾ–
ಪ್ಯೇವಂ ಪುರಾ ಸಂಚಯನಾಚ್ಛ್ರುತಂ ಚೇತ್ ॥

**ಸ್ಮೃತ್ಯಂತರೇ :-** ಪಿತ್ರೋರ್ಮೃತೌ ಚೇದ್ದೂರಸ್ಥಃ ಶ್ರುತ್ವಾ ತದ್ದಿವಸಾತ್ಪರಮ್ ।
ಪುತ್ರಃ ಶುಧ್ಯೇದ್ದಶಾಹೇನ ಸಂಚಯಾತ್ಪ್ರಾಕ್ತು ಶೇಷತಃ ॥

**ಸ್ಮೃತಿಸಾರಸರ್ವಸ್ವೇ :-** ಶಾವೇ ಚ ಸೂತಕೇ ಚಾಂತರಾ ಮಧ್ಯೇಽವಗತೇ ಪುತ್ರವ್ಯತಿರಿಕ್ತಾನಾಂ ಸರ್ವೇಷಾಂ ಸಪಿಂಡಾನಾಂ ಶಿಷ್ಟಾಹಮೇವಾಘಂ ಭವತಿ । ಅಸ್ಥಿಸಂಚಯನಾತ್ಪ್ರಾಕ್ ದಶಾಹಮಧ್ಯೇ ಪಿತ್ರೋರ್ಮೃತಿಶ್ರುತೌ, ಪುತ್ರಸ್ಯ ಮುಖ್ಯಕರ್ತುಃ ಅವಶಿಷ್ಟಮೇವಾಹಮಾಶೌಚಂ ತದೂರ್ಧ್ವಂ ಚೇತ್ ಸದಾ ದಶಾಹಮೇವಾಶೌಚಮ್ ಇತಿ॥

**ಮನುಃ-** ವಿಗತಂ ತು ವಿದೇಶಸ್ಥಂ ಶೃಣುಯಾದ್ಯೋ ಹ್ಯನಿರ್ದಶಮ್ ।
ಯಚ್ಛೇಷಂ ದಶರಾತ್ರಸ್ಯ ತಾವದೇವಾಶುಚಿರ್ಭವೇತ್ ॥
(ಏತತ್ ಸಪಿಂಡಾನಾಮ್)

**ಶತಶ್ಲೋಕೀ:-** ಶಿಷ್ಟಾಹಮೇವ ಸರ್ವೇಷಾಂ ಅಪಿ ಜ್ಞಾತೇನಂತರಾತ್ಮಘೇ ।
ಪ್ರಾಕ್ಸಂಚಯಾತ್ಸುತಸ್ಯೇತ್ಥಂ ತದೂರ್ಧ್ವಂ ದಶರಾತ್ರಕಮ್ ॥ಇತಿ॥

## ೩. ಜ್ಯೇಷ್ಠ ಪುತ್ರನ ವಿಚಾರ

ಮುಖ್ಯ ಕರ್ತೃವಾದ ಜ್ಯೇಷ್ಠ ಪುತ್ರನು ( ಹಿರೇ ಮಗನು) ಸಂಚಯನದ ನಂತರ ತಾಯಿ ತಂದೆಯರ ಮರಣ ವಾರ್ತೆಯನ್ನು ಕೇಳಿದ ನಂತರ ಒಂದು ವರ್ಷದ ಒಳಗಾಗಲೀ ಅಥವಾ ಹೊರತಾಗಲೀ (ಕನಿಷ್ಠರು) ತಮ್ಮಂದಿರು ಸಂಸ್ಕಾರವನ್ನು ಮಾಡಿರಲೀ ಅಥವಾ ಬಿಟ್ಟಿರಲೀ (ಪೃಥಕ್) ದಶಾಹ ಹತ್ತು ದಿವಸ ಆಶೌಚವನ್ನು ಮತ್ತು ಉದಕ ಪಿಂಡಾದಿಗಳನ್ನು ಆಚರಿಸಲೇ ಬೇಕು.

(ಜ್ಯೇಷ್ಠ ಪುತ್ರನು) ಹಿರೇ ಮಗನು ವಿದೇಶದಲ್ಲಿದ್ದರೂ ಸಹ ಆದಷ್ಟು ಪ್ರಯತ್ನ ಪೂರ್ವಕ ಸಂಚಯನದೊಳಗೇ, ಅಂದರೆ ನಾಲ್ಕು ದಿವಸದೊಳಗೇ ಬರುವ ವ್ಯವಸ್ಥೆ ಮಾಡಬೇಕು. ( ಕನಿಷ್ಠರು) ತಮ್ಮಂದಿರು ತಾಯಿ ತಂದೆಯವರ ದಹನಾದಿ ಸಂಸ್ಕಾರವನ್ನು ಪ್ರಾರಂಭಿಸಿದ್ದರೂ ಸಹ ಹಿರೇಮಗನು ತಮ್ಮಂದಿರೊಂದಿಗೆ ಸೇರಿಕೊಂಡು ಕ್ಷೌರಾದಿಗಳನ್ನು ಮಾಡಿಸಿಕೊಂಡು ಕ್ರಿಯಾವಸ್ತ್ರವನ್ನು ಧರಿಸಿ ಹಿಂದೆ ಕಳೆದ ದಿವಸಗಳ ತಿಲೋದಕ ಪ್ರದಾನ ಮಾಡಿ (ನ ತು ಪಿಂಡಂ – ಪಿಂಡ ಪ್ರದಾನದ ಅವಶ್ಯಕತೆಯಿಲ್ಲ) ತಮ್ಮಂದಿರೊಂದಿಗೆ ಸಂಚಯನಾದಿ ಮುಂದಿನ ಕರ್ಮಾಂಗಗಳನ್ನು ಚಂದವಾಗಿ ನಡೆಸಿಕೊಂಡು ಹೋಗಬೇಕು. ಒಂದೊಮ್ಮೆ ಸುದ್ದಿ ತಿಳಿದರೂ ಸಂಚಯನದ ಒಳಗೆ ಬರಲಿಕ್ಕೆ ಆಗದಿದ್ದರೂ ಇದೇ ವ್ಯವಸ್ಥೆಯಿಂದ ತಾಯಿ ತಂದೆಯವರ ಸಂಸ್ಕಾರವನ್ನು ಮುಂದುವರಿಸಬೇಕು. ಯಾಕೆಂದರೆ ಸಂಚಯನದ ಅಥವಾ ನಾಲ್ಕು ದಿವಸಗಳ ಒಳಗೇ ತಾಯಿ ತಂದೆಯವರ ಮರಣದ ವಾರ್ತೆಯನ್ನು ಕೇಳಿದರೆ ಅಥವಾ ಜ್ಞಾನವಾದರೆ ಎಂದಿರುವುದರಿಂದ ಮೇಲೆ ಹೇಳಿದ ವ್ಯವಸ್ಥೆಯನ್ನು ಅನುಸರಿಸಬಹುದು.

ಅಥವಾ ಸಂಚಯನ, ನಾಲ್ಕು ದಿವಸ ಎಂದು ಹೇಳಿ, ಕರ್ಮಾಂಗದಲ್ಲಿ ಸೇರಿಕೊಳ್ಳಲೇ ಬೇಕು ಎಂಬ ಅಭಿಪ್ರಾಯವೂ ಇದೆಯಾದ್ದರಿಂದ ಇಲ್ಲಿ ವಿಕಲ್ಪವೂ ಬರುತ್ತದೆ. ಆದರೂ ಪ್ರಯತ್ನಪೂರ್ವಕ ನಾಲ್ಕು ದಿವಸಗಳೊಳಗೆ ಬಂದು ಸೇರಿಕೊಳ್ಳುವ ವ್ಯವಸ್ಥೆ ಮಾಡುವುದು ಉತ್ತಮವೆಂದು ತಿಳಿದುಬರುತ್ತದೆ.

ಹಿರೇ ಮಗನು (ಮುಖ್ಯಕರ್ತಾ) ಸಂಚಯನದ ನಂತರ ಅಥವಾ ನಾಲ್ಕು ದಿವಸಗಳ ನಂತರ ತನ್ನ ತಾಯಿ ತಂದೆಯವರ ಮರಣ ವಾರ್ತೆ ಕೇಳಿದರೆ ಅಥವಾ ಜ್ಞಾನವಾದರೆ, ಇಲ್ಲಿಗೆ ಬಂದು ಕ್ಷೌರವನ್ನು ಮಾಡಿಕೊಂಡು ವಾರ್ತೆ ತಿಳಿದ ದಿವಸದಿಂದ ಹತ್ತು ರಾತ್ರಿ ಆಶೌಚವನ್ನು (ಪೃಥಕ್) ಬೇರೆಯಾಗಿ ಬಳಸಬೇಕು ಮತ್ತು ಪ್ರತಿದಿವಸವೂ ತಿಲೋದಕವನ್ನು ಪ್ರದಾನಮಾಡಬೇಕು. (ಪಿಂಡ ಪ್ರದಾನದ ಅವಶ್ಯಕತೆಯಿಲ್ಲ). ಹಿರೇಮಗನಿಗೆ ಆಶೌಚವು ಮುಗಿದ ನಂತರ ಮುಂದೆ ಮುಂದಿನ ಸಂಸ್ಕಾರವನ್ನು ಮುಂದುವರಿಸಬೇಕು ಎಂದು ವ್ಯವಸ್ಥೆ ಹೇಳಿರುವರು.

ಕೆಲವು ವಿಮರ್ಶಕ ವಿದ್ವಾಂಸರು ಹಿರೇಮಗನು (ಮುಖ್ಯ ಕರ್ತಾ) ಹತ್ತು ದಿವಸಗಳೊಳಗೆ ಯಾವುದೇ ಸಮಯಕ್ಕೆ ಬಂದರೂ ಹಿರೇಮಗನಿಗೆ ಅವನ ಅಧಿಕಾರವು ಬಂದೇ ಬರುತ್ತದೆ. ತಮ್ಮಂದಿರ ಅಧಿಕಾರವು ಮೊಟಕುಗೊಳ್ಳುತ್ತದೆ. ಮುಂದಿನ ಪಿಂಡ ಪ್ರದಾನಾದಿಗಳನ್ನು ಹಿರಿಮಗನೇ ಮುಂದುವರಿಸಬೇಕೆಂದು ಹೇಳುವರು. ಆದರೆ ಸಂಚಯನಾನಂತರ ಹಿರಿ ಮಗನು ಮರಣ ವಾರ್ತೆ ತಿಳಿದರೆ ಅಥವಾ ಬಂದು ಸೇರಿದರೆ ಬಂದ ದಿವಸದಿಂದ ಅಥವಾ (ಮರಣ ತಿಳಿದ ದಿವಸದಿಂದ) ಹತ್ತು ದಿವಸ ಆಶೌಚವನ್ನು ಬೇರೆಯಾಗಿಯೇ ಬಳಸಬೇಕೆಂದು ಹೇಳಿದ್ದರಿಂದಲೂ ಮತ್ತು ಪ್ರಥಮ ದಿವಸ ಯಾರು ನಿತ್ಯಪಿಂಡ (ಪ್ರೇತಪಿಂಡ)ವನ್ನು ಪ್ರದಾನ ಮಾಡುವರೋ ಅವರೇ ಹತ್ತು ದಿವಸಪರ್ಯಂತ ಪಿಂಡ ಪ್ರದಾನ ಮಾಡಬೇಕು ಎಂದು ಹೇಳಿದ್ದರಿಂದಲೂ (ಹತ್ತು ದಿನದೊಳಗೆ ಕರ್ತ್ರ್ಯಂತರ, ದ್ರವ್ಯಾಂತರ, ಪಾತ್ರಾಂತರಗಳನ್ನು ನಿಷೇಧಿಸಿದೆ) ತಮ್ಮನು ಪ್ರಾರಂಭ ಮಾಡಿದ್ದರೆ ಮಧ್ಯದಲ್ಲಿ ಬಿಡುವಂತಿಲ್ಲ. ನಿತ್ಯ ವಿಧಿಯನ್ನು ಪ್ರಾರಂಭಿಸಿದವನೇ ಹತ್ತು ದಿವಸ ಮುಗಿಸಬೇಕು. ಅದರಿಂದಲೇ ಹಿರೇಮಗನು ತಿಲೋದಕವನ್ನು ಮಾತ್ರ ಪ್ರದಾನ ಮಾಡಬೇಕೆಂದು ಹೇಳಿರುವರು.

ತಮ್ಮಂದಿರು ಕ್ರಿಯಾಮಾಡಿ ಮುಗಿಸಿದ ಮೇಲೆ ಹಿರೇಮಗನಿಗೆ ಗೊತ್ತಾದರೆ, ಮೂರು ರಾತ್ರಿ ಆಶೌಚವೂ ಎಂಬ ವಚನವು ಹಿರೇಮಗನಿಗೆ (ಮುಖ್ಯಕರ್ತೃವಿಗೆ) ಸಂಬಂಧಿಸಿದ್ದಲ್ಲವೆಂದು ತಿಳಿಯಬೇಕು. ಯಾಕೆಂದರೆ, ಹಿರೇಮಗನು ಕ್ರಿಯಾ ಮುಗಿಸಿದ್ದರೂ ವರ್ಷಗಳೇ ಕಳೆದು ಹೋಗಿದ್ದರೂ ಸಹ ಹಿರಿಯ ಮಗನು ಹತ್ತು ದಿವಸ ಆಶೌಚವನ್ನು ಬಳಸಬೇಕು. ಹತ್ತು ದಿವಸ ತಿಲೋದಕಪ್ರದಾನ ಮಾಡಬೇಕು. ಹನ್ನೊಂದನೇ ದಿವಸ ಪುನಃ ಸಪಿಂಡೀಕರಣ ಶ್ರಾದ್ಧವನ್ನು ನಡೆಸಬೇಕೆಂದು ವಿಧಿಸಿದೆ. ಹಿರೇಮಗನು ತಾಯಿತಂದೆಯರ ಸಂಸ್ಕಾರ ಕರ್ಮವನ್ನು ಮುಗಿಸಿದ್ದರೆ,

ತಮ್ಮಂದಿರು ಒಂದು ವರ್ಷದ ನಂತರವಾದರೆ, ಮೂರು ರಾತ್ರಿ ಆಶೌಚವನ್ನು ಬಳಸಿದರೆ ಸಾಕೆಂಬ ಅಭಿಪ್ರಾಯವಿದೆ ಎಂಬುದಾಗಿ ತಿಳಿಯಬೇಕು.

ಸಪಿಂಡದವರು ಅಥವಾ ಬೇರೆ ಯಾರಾದರೂ ಸಂಸ್ಕಾರವನ್ನು ನಡೆಸಿದ್ದರೆ ಹಿರೇಮಗನು ದಹನ ವಿಧಿಯನ್ನು ಬಿಟ್ಟು ಉಳಿದ ಎಲ್ಲವನ್ನೂ ಆಚರಿಸಬೇಕೆಂದು ಹೇಳಿರುವರು. ಜೇಷ್ಠ ಪುತ್ರನು ( ಮುಖ್ಯ ಕರ್ತೃ) ನಡೆಸುವ ಪುನಃಸಂಸ್ಕಾರ ವಿಧಾನವನ್ನು ಇಲ್ಲಿ ಬರೆಯುವುದಿಲ್ಲ. ಗ್ರಂಥಾಂತರದಿಂದ ನೋಡಿಕೊಳ್ಳಬೇಕು.

---

**ಪೈಠೀನಸಿ:–** ಪಿತರೌ ಚೇನ್ಮೃತೌ ಸ್ಯಾತಾಂ ದೂರಸ್ಥೋಽಪಿ ಜ್ಯೇಷ್ಠಪುತ್ರಕಃ ।
ಶ್ರುತ್ವಾ ತದ್ದಿನಮಾರಭ್ಯ ದಶಾಹಂ ಸೂತಕೀ ಭವೇತ್ ॥

**ಆಶೌಚಸಿದ್ಧಾಂತ:–**
ಅನಂತರಂ ಸಂಚಯನಾತ್ತು ಪಿತ್ರೋಃ ಮೃತೌ ಶ್ರುತಾಯಾಂ ಶ್ರುತಿವಾಸರಂ ತತ್ ।
ಆರಭ್ಯ ಪುತ್ರಸ್ಯ ಭವೇದ್ದಶಾಹಮ್ ಆಶೌಚಮಿತ್ಯೇವ ಮತಂ ಮುನೀನಾಮ್ ॥

**ತಾತ್ಪರ್ಯಬೋಧಿನೀ:–** ಸಂಚಯನಾನಂತರಂ ದಶಾಹಾತ್ ಪ್ರಾಕ್ ಪರಂ ವಾ ಪಿತ್ರೋರ್ಮರಣಶ್ರವಣೇ ಪುತ್ರಸ್ಯ (ಮುಖ್ಯಕರ್ತುಃ) ದಶಾಹಮಾಶೌಚಂ ಗ್ರಾಹ್ಯಮ್ ಇತ್ಯರ್ಥಃ ॥

**ಸ್ಮೃತ್ಯರ್ಥಸಾರೇ:–** ಮಾತಾಪಿತ್ರೋರ್ಮರಣೇ ದಶಾಹಾದೇರೂರ್ಧ್ವಂ ಸಂವತ್ಸರಾತ್ ಊರ್ಧ್ವಮಪಿ, ಪುತ್ರಃ ಶ್ರುತದಿವಸಮಾರಭ್ಯ ದಶಾಹಮಾಶೌಚಂ ಕುರ್ಯಾದುದಕಪಿಂಡಾದಿ ಚ ॥

**ಸ್ಮೃತಿಸಂಗ್ರಹೇ :–** ಮುಖ್ಯಕರ್ತಾ ವಿದೇಶಸ್ಥಃ ಮಾತಾಪಿತ್ರೋರ್ಮೃತೌ ಯದಿ ।
ಸಂವತ್ಸರವ್ಯತೀತೇಽಪಿ ಕುರ್ಯಾತ್ ಪ್ರೇತಕ್ರಿಯಾಂ ಪುನಃ ॥

**ವಿಜ್ಞಾನೇಶ್ವರಃ :–** ಮಹಾಗುರುನಿಪಾತೇ ತು ಆರ್ದ್ರವಸ್ತ್ರೋಪವಾಸಿನಾ ।
ಅತೀತೇಽಬ್ದೇಽಪಿ ಕರ್ತವ್ಯಂ ಪ್ರೇತಕಾರ್ಯಂ ಯಥಾವಿಧಿ ॥
(ಕುರ್ಯಾತ್ ಪ್ರೇತಕ್ರಿಯಾಂ ಪುನಃ)

**ಸ್ಮೃತ್ಯಂತರೇ:–** ಯತ್ರ ಕುತ್ರ ಸ್ಥಿತಃ ಪುತ್ರಃ ಶ್ರುತ್ವಾ ಪಿತೃವಿಪರ್ಯಯಮ್ ।
ಜ್ಞಾತ್ವಾ ತದ್ದಿನಮಾರಭ್ಯ ದಶಾಹಂ ಸೂತಕೀ ಭವೇತ್ ॥

**ಸ್ಮೃತಿಸಾರಸರ್ವಸ್ವೇ:–** ಅಪಿ ಚ ಕೃತಕ್ರಿಯೇ ತ್ರಿರಾತ್ರಂ ಸ್ಯಾತ್ ದಶಾಹಂ ಅಕೃತಕ್ರಿಯೇ ಇತ್ಯತ್ರ ಕೃತಕ್ರಿಯೇ ತ್ರ್ಯಹವಿಧಿಃ ಕನಿಷ್ಠ ವಿಷಯ ಏವ॥ ಜೇಷ್ಠಸ್ಯ ಮುಖ್ಯಕರ್ತುಃ ।

**ಸ್ಮೃತ್ಯಂತರೇ:–** ಕೃತಕ್ರಿಯೇಽಪಿ ಪಿತರಿ ದಶಾಹಂ ಸೂತಕೀ ಭವೇತ್ ।
ದದ್ಯಾತ್ತಿಲೋದಕಂ ಪಿಂಡಂ ಸಪಿಂಡೀಕರಣಂ ಪುನಃ ॥ ಇತಿ॥
ಅತ್ರ ಅಯಂ ವಿವೇಕಃ । ಸ್ಮೃತಿ ಸಂಗ್ರಹವಚನಂ॥

**ಸ್ಮೃತಿಸಂಗ್ರಹೇ:-** ಮುಖ್ಯಕರ್ತಾ ವಿದೇಶಸ್ಥಃ ಕಾಲೇ ಕಾಲೇ ಶ್ರುತೋ ಯದಿ ।
ತಿಲವಾರಿ ಪ್ರಕುರ್ವೀತ ಪಿಂಡದಾನಂ ವಿವರ್ಜಯೇತ್ ॥

**ಸ್ಮೃತಿಸಾರಸರ್ವಸ್ವೇ:-** ಕನಿಷ್ಠಕೃತಂ ಸಪಿಂಡೀಕರಣಶ್ರಾದ್ಧಾಂತಂ ಕೃತ್ಯಮ್ । ಜ್ಯೇಷ್ಠಃ ಶ್ರುತವಾನ್ ಯದಿ । ತದಾ ತಿಲೋದಕಮಾತ್ರಂ (ದಶಾಹಂ) ದದ್ಯಾತ್ ಪಿಂಡದಾನಂ ವಿವರ್ಜಯೇದಿತಿ ॥ ನ ತ್ವೇಕೋದ್ದಿಷ್ಟಮಿತಿ ವಚನಾರ್ಥೋ ದೃಷ್ಟವ್ಯಃ ( ಮಂತವ್ಯಶ್ಚ)।

**ಅತ್ರ -** ಮುಖ್ಯಕರ್ತ್ರಾ ಕರಿಷ್ಯಮಾಣಂ ಪುನಃ ಸಂಸ್ಕಾರ ವಿಧಾನಂ
ಅನ್ಯತ್ರಾವಗಂತವ್ಯಮ್, ವಿಸ್ತರಭಯಾತ್ ನ ಲಿಖ್ಯತೇ ॥ ಇತಿ ವಿಜ್ಞಪ್ತಿಃ ॥

## ೪. ಕನಿಷ್ಠಪುತ್ರರ ವಿಚಾರ

ಕನಿಷ್ಠ ಪುತ್ರರು ಅಥವಾ ತಮ್ಮಂದಿರು ಮಾತಾಪಿತೃಗಳ ಮರಣದಲ್ಲಿ ಸಂಚಯನದೊಳಗೆ ಮೃತವಾರ್ತೆ ತಿಳಿದುಕೊಂಡರೆ ಅವಶಿಷ್ಟ ಮೃತಾಶೌಚ ದಿಂದಲೇ ಶುದ್ಧಿಯಾಗುವುದು.

ಸಂಚಯನದ ನಂತರ ದಶಾಹದೊಳಗೆ ಮೃತವಾರ್ತೆ ಕೇಳಿದರೆ, ಪೂರ್ವ ಮೃತಾಶೌಚದಿಂದಲೇ ಶುದ್ಧಿಯೆಂದು ಕೆಲವರ ಅಭಿಪ್ರಾಯವಾಗಿದೆ. (ಇಲ್ಲಿಯೂ ವಿಕಲ್ಪವಿದೆಯೆಂದು ತಿಳಿಯಬೇಕು) ಸಂಚಯನಾನಂತರ ಸಂಸ್ಕಾರ ಪ್ರಾರಂಭವಾಗಿದ್ದರೂ ಸಹ ತಾಯಿ ತಂದೆಯರ ಮೃತವಾರ್ತೆ ಕೇಳಿದರೆ ಕನಿಷ್ಠರು ಪೃಥಕ್ ದಶಾಹ ಆಶೌಚವನ್ನು ಬಳಸಬೇಕೆಂದು ಶಿಷ್ಟರು ಹೇಳುವರು.

ವ್ಯಾಕರಣ ಶಾಸ್ತ್ರದ ನಿಯಮದಂತೆ ಪುತ್ರ ಪದದ ಅರ್ಥವು ಶಬ್ದಗತವಾಗಿದೆ. ಅರ್ಥಗತವಲ್ಲವೆಂದೂ, ಪುತ್ರ ಪದವು ಉಪಲಕ್ಷಣವೆಂದೂ ಹೇಳುವರು. ದೇಶಾಚಾರದಂತೆ ನಡೆದುಕೊಳ್ಳುವುದು ಉತ್ತಮ ಪಕ್ಷವೆಂದು ತಿಳಿಯಬೇಕು.

ಹತ್ತು ದಿವಸಗಳ ನಂತರ ಒಂದು ವರ್ಷದೊಳಗೆ ಜ್ಯೇಷ್ಠಪುತ್ರರು ಸಂಸ್ಕಾರವನ್ನು ನಡೆಸದಿದ್ದರೂ ಸಹ ಕನಿಷ್ಠರು (ತಮ್ಮಂದಿರು) ತಮ್ಮ ತಾಯಿ ತಂದೆಯರ ಮರಣ ವಾರ್ತೆಯನ್ನು ಕೇಳಿದರೆ, ವಾರ್ತಾಶ್ರವಣ ದಿವಸದಿಂದ ಹತ್ತು ರಾತ್ರಿ ಆಶೌಚವನ್ನು ಬಳಸಬೇಕು. ಮತ್ತು ಜಲಾಂಜಲಿ, ತಿಲಾಂಜಲಿಗಳನ್ನು ಮಾತ್ರ ಮಾಡಲೇಬೇಕು.

(ಜ್ಯೇಷ್ಠನು) ಹಿರೇ ಮಗನು ಸಂಸ್ಕಾರವನ್ನು ನಡೆಸಿದರೆ ಒಂದು ವರ್ಷದ ನಂತರ ಕನಿಷ್ಠರು (ತಮ್ಮಂದಿರು) ತಾಯಿ ತಂದೆಯರ ಮರಣ ವಾರ್ತೆ ಕೇಳಿದರೆ ಮೂರು ರಾತ್ರಿ ಆಶೌಚವನ್ನು ಬಳಸಿ ಉದಕಾಂಜಲಿಯನ್ನು ನೀಡಿದರೆ ಸಾಕು ಎಂದು ಹೇಳಿರುವರು.

ಮುಖ್ಯ ಕರ್ತೃ ಅಥವಾ ಹಿರೇ ಮಗನನ್ನು ಬಿಟ್ಟು ಬೇರೆ ಯಾರಾದರೂ ಬಂಧುಗಳು ಸಂಸ್ಕಾರವನ್ನು ನಡೆಸಿದ್ದರೆ ಮಕ್ಕಳು ದಹನವನ್ನು ಬಿಟ್ಟು ಇನ್ನುಳಿದ ಎಲ್ಲಾ ಸಂಸ್ಕಾರಗಳನ್ನು ಹತ್ತು ದಿವಸ ಆಶೌಚವನ್ನು ಬಳಸಿ ಮಾಡಿ ಮುಗಿಸಬೇಕೆಂದು ಹೇಳಿರುವರು. ಜ್ಯೇಷ್ಠ ಕನಿಷ್ಠರ ವ್ಯವಸ್ಥೆಯನ್ನು ವಿವೇಕದಿಂದ ವಿವೇಚಿಸಿ ನಿರ್ಧರಿಸಿ ನಿರ್ದೇಶಿಸಬೇಕೆಂದು ವಿನಂತಿ.

---

**ಆಶೌಚಸಿದ್ಧಾಂತೇ:–** ಕೃತೋರ್ಧ್ವದೇಹಕ್ರಿಯಯೋಶ್ಚ ಪಿತ್ರೋಃ ಅಬ್ದಾತ್ಪರಂ ತು ಶ್ರವಣೇಽನುಜಸ್ಯ । ತ್ರಿರಾತ್ರಮೇವಾಘಮಥ ಪ್ರಮೀತೇ ಮಹಾಗುರೌ ದ್ವಾದಶವಾಸರಾಣಿ ॥

**ಸ್ಮೃತಿಸಾರಸರ್ವಸ್ವೇ:–** ಮಹಾಗುರುಲಕ್ಷಣಮುಕ್ತಮ್ :
ಉತ್ಪಾದ್ಯ ಪುತ್ರಂ ಸಂಸ್ಕೃತ್ಯ ವೇದಮಧ್ಯಾಪಯೇತ್ತು ಯಃ ।
ಜೀವನಸ್ಯ ಯಥಾವೃತ್ತಿಂ ಕಲ್ಪ್ಯತೇ ಸ ಮಹಾಗುರುಃ ॥ಇತಿ ।

**ತಾತ್ಪರ್ಯಬೋಧಿನೀ :–** ಅಗ್ರಜೇನ ಕೃತೋರ್ಧ್ವದೇಹಕ್ರಿಯಯೋಃ ಪಿತ್ರೋಃ ವತ್ಸರಾಂತೇ ಮರಣಶ್ರವಣೇ ಅನುಜಾತಾನಾಂ ತ್ರಿರಾತ್ರಮಾಶೌಚಮ್ ಇತಿ ॥

**ಸ್ಮೃತಿಚಂದ್ರಿಕಾಯಾಂ:–** ಜ್ಯೇಷ್ಠೇನ ವಾ ಕನಿಷ್ಠೇನ ಸಪಿಂಡೀಕರಣೇ ಕೃತೇ ।
ದೇಶಾಂತರಗತಾನಾಂ ಚ ಪುತ್ರಾಣಾಂ ತು ಕಥಂ ಭವೇತ್ ॥

ಶ್ರುತ್ವಾ ತು ವಪನಂ ಕೃತ್ವಾ ದಶಾಹಾಂ ತಂ ತಿಲೋದಕಮ್ ।
ತತಃ ಸಪಿಂಡೀಕರಣಂ ಕುರ್ಯಾದೇಕಾದಶೇಽಹನಿ ॥
ದ್ವಾದಶಾಹೇ ನ ಕರ್ತವ್ಯಂ ಇತಿ ಶಾತಾತಪೋಽಬ್ರವೀತ್ ।

**ಸ್ಮೃತಿಸಾರಸರ್ವಸ್ವೇ :–.** ತಜ್ಜ್ಯೇಷ್ಠಕೃತೇ ಸಪಿಂಡೀಕರಣಾಂತಪ್ರೇತಕೃತ್ಯೇ ಕನಿಷ್ಠಸ್ಯ ವತ್ಸರಾತ್ ಪ್ರಾಕ್ ದಶಾಹಂ ತಿಲೋದಕದಾನಪರಮ್ ಇತಿ ನ ದೋಷಃ । ಅತ್ರೋದಕದಾನಾದಿ ವಿಧಿನಿಮಿತ್ತತ್ವಾತ್ ಆಶೌಚಸ್ಯ ತದವಿನಾಭೂತಮಾಶೌಚೋದಕಶಬ್ದೇನೋಚ್ಯತೇ ॥ ತತಶ್ಚ ದಶಾಹೋದಕದಾನವಿಧೌ ದಶಾಹಮ್ । ತ್ರ್ಯಹಮುದಕದಾನವಿಧೌ ವಾ ಆಶೌಚಂ ತ್ರ್ಯಹಮಿತ್ಯರ್ಥೋ ಗ್ರಾಹ್ಯಃ॥ ಕಿಂಚ ಜ್ಯೇಷ್ಠೇನ ಪಿತುಃ ಸಂಪಿಂಡೀಕರಣಾಂತ ಪ್ರೇತಕೃತ್ಯೇ ಕೃತೇ ಕನಿಷ್ಠಃ ಪಿತೃಮೃತಿಂ ಶ್ರುತ್ವಾ ವಪನಂ ಕೃತ್ವಾ ದಶಾಹಂ ತಿಲೋದಕಂ ದದ್ಯಾತ್ । ಕನಿಷ್ಠಕೃತೇ ತು ತಸ್ಮಿನ್ ಜ್ಯೇಷ್ಠಃ ಪಿತೃಮೃತಿಂ ಶ್ರುತ್ವಾ ವಪನಂ ಕೃತ್ವಾ ದಶಾಹಾಂತಂ ತಿಲೋದಕಮಾತ್ರಂ ದದ್ಯಾತ್ (ನ ತು ಪಿಂಡಂ)। ತತಃ ಏಕಾದಶೇಽಹನಿ ಪುನಃ ಸಂಪಿಡೀಕರಣಮೇವ ಕುರ್ಯಾತ್ ನ ತು ಏಕೋದ್ದಿಷ್ಟಮಿತಿ । ಇತಿ ವಿಭಜ್ಯ ಜ್ಯೇಷ್ಠೇನ ವಾ ಕನಿಷ್ಠೇನ ಇತಿ ವಚನಾರ್ಥೋ ದ್ರಷ್ಟವ್ಯಃ ॥

**ಸ್ಮೃತ್ಯಂತರೇ :–** ದೇಶಾಂತರಸ್ಥೌ ಪಿತರೌ ಮೃತೌ ಚೇತ್ ಅನ್ಯೋಽಪಿ ಕುರ್ಯಾದಖಿಲಂ ಚ ಪೈತ್ರಕಮ್ ।

ದಾಹಂ ವಿನಾಽನ್ಯಾನಿ ಪುನಶ್ಚ ಸರ್ವಂ ಜ್ಯೇಷ್ಠೋಽಪಿ ಕುರ್ಯಾದನುಜ್ಯೈಃ ಸಪಿಂಡಮ್ ॥

**ಸ್ಮೃತಿಸಾರ ಸರ್ವಸ್ವೇ:-**

ಅನ್ಯೇನ ಕೃತಂ ಪ್ರೇತಕೃತ್ಯಂ ಜ್ಯೇಷ್ಠಪುತ್ರಃ ಪುನಃ ಸರ್ವಂ ದಾಹಂ ವಿನಾ ವಿಧಿವತ್ ಕುರ್ಯಾತ್ । ಅನುಜ್ಯೈಃ ಕೃತಂ ಚೇತ್ (ಸಪಿಂಡಂ ಪುನಃ) । ಸಪಿಂಡೀಕರಣಮಾತ್ರಂ ಕುರ್ಯಾತ್ ಇತಿ ॥

ಇಲ್ಲಿಯ ದೇಶಾಂತರ ಮತ್ತು ಕಾಲಾಂತರದ ವ್ಯವಸ್ಥೆಯನ್ನೂ ಕಲಿಯುಗದಲ್ಲಿ ನಿಷೇಧಿಸಿದೆ. ನಮ್ಮ ದಾಕ್ಷಿಣಾತ್ಯ ಪದ್ಧತಿಯಲ್ಲಿ ಆಶೌಚವನ್ನು ಕಡಮೆ ಬಳಸುವ ಪದ್ಧತಿಯಿಲ್ಲ. ಯಾಕೆಂದರೆ ಇದರಿಂದ ಪೂರ್ವಕೃತ ಪುಣ್ಯ ಫಲವು ನಾಶವಾಗುವದೆಂದು ಹೇಳಿರುವರು ಮತ್ತು ಮನ್ವಾದಿ ಸ್ಮೃತಿಗಳಿಗೆ ವಿರೋಧವಾದ್ದರಿಂದ ಈ ವಿಷಯವನ್ನು ಉಪೇಕ್ಷಿಸಬೇಕೆಂದು ವಿಜ್ಞಾನೇಶ್ವರಾದಿಗಳು ಹೇಳಿರುವರು. ಆಶೌಚ ಶತಕದಲ್ಲಿ ಈ ಕಲಿಯುಗದಲ್ಲಿ ಆಶೌಚವನ್ನು ಕಡಮೆ ಬಳಸಬಾರದೆಂದು ಹೇಳಿದ್ದಾರೆ. ಆದ್ದರಿಂದ ದೇಶಾಂತರ ಯುಗಾಂತರದ ವಿಷಯಕ ವಚನವನ್ನು ಆಚರಿಸುವ ಅವಶ್ಯಕತೆ ಇಲ್ಲವೆಂದು ಧರ್ಮ ಶಾಸ್ತ್ರ ಪಂಡಿತರ ಅಭಿಪ್ರಾಯವಾಗಿದೆಯೆಂದು ತಿಳಿಸಬಯಸುತ್ತೇನೆ.

**ದೇಶಾಂತರ ಕಾಲಾಂತರ ವಿಷಯಕ ವಚನಾನಿ ।**

**ಸ್ಮೃತ್ಯಂತರೇ:-** ಪಿತುರ್ದೇಶಾಂತರಮೃತೌ ಷಣ್ಮಾಸಾದ್ವತ್ಸರಾದಧಃ ।
ದಶರಾತ್ರಂ ತ್ರಿರಾತ್ರಂ ಸ್ಯಾತ್ ದಶಾಹಂ ದಾಹಕಸ್ಯ ತು ॥

**ಪೈಠೀನಸಿ:-** ದೇಶಾಂತರಮೃತಿರ್ಯತ್ರ ತ್ವನುಜಾಗ್ರಜಯೋರ್ಯದಿ ।
ಷಣ್ಮಾಸಾದ್ವತ್ಸರಾದರ್ವಾಕ್ ದಶಾಹಂ ತ್ರ್ಯಹಮೇವ ಚ ॥

**ಗಾಲವಃ :-** ಕೃತೋದಕೇ ತು ಷಣ್ಮಾಸಾತ್ ಪಕ್ಷಿಣೀ ತ್ವಘಮಿಷ್ಯತೇ ।
ಅಧಶ್ಚೇತ್ ತ್ರಿದಿನಂ ಗ್ರಾಹ್ಯಂ ಅಕೃತೇ ತು ದಶಾಹ್ನಿಕಮ್ ॥

**ಸ್ಮೃತಿಸಾರ ಸರ್ವಸ್ವೇ :-** ಏತತ್ಸರ್ವಂ ವಚನಂ, ವಿಜ್ಞಾನೇಶ್ವರಾದಿಭಿಃ ಅನಾದೃತತ್ವಾತ್ (ಮನ್ವಾದಿ ವಚನವಿರೋಧಾತ್) ಮನ್ವಾದಿ ವಚನಪ್ರಕಾರಸ್ಯೈವ ಪ್ರತಿಪಾದನಾಚ್ಚ । ಮನ್ವರ್ಥವಿಪರೀತಾ ತು ಯಾ ಸ್ಮೃತಿಃ ಸಾ ನ ಶಸ್ಯತೇ । ಇತಿ ಮನ್ವಾದಿಸ್ಮೃತಿ ವಿರೋಧೇನ ಅಪ್ರಶಸ್ತತ್ವಾಚ್ಚ ಸಮಾಚಾರಾಭಾವಾಚ್ಚ ನ ಆದರಣೀಯಮಿತಿ ॥

**ಶತಶ್ಲೋಕೀ :-** ನ ಕರ್ತವ್ಯಂ ನ ಕರ್ತವ್ಯಂ ಆಘಸಂಕೋಚನಂ ಕಲೌ ।
ಕ್ರಮಾಽಶೌಚಂ ಗುಣಾಽಶೌಚಂ ನಿರಸ್ಯಂ ದೂರತಃ ಕಲೌ ॥ ಇತ್ಯುಕ್ತತ್ವಾತ್ ॥ಇತಿ॥

## ೫. ಮಲತಾಯಿಯ ವಿಚಾರ

ಮಲತಾಯಿಯು ಅಥವಾ ಅವಳ ಮಕ್ಕಳು (ಭಿನ್ನೋದರ ಅಣ್ಣ ತಮ್ಮಂದಿರು) ಮೃತರಾಗಿ ಒಂದು ವರ್ಷದೊಳಗೆ ಮರಣ ವಾರ್ತೆ ಕೇಳಿದರೆ, ಸಂಪೂರ್ಣ ದಶಾಹ ಆಶೌಚವನ್ನು ಬಳಸಬೇಕು. ಒಂದು ವರ್ಷದ ನಂತರ ಮೃತ ವಾರ್ತೆ ಕೇಳಿದರೆ ಸಂಸ್ಕಾರವಾಗದಿದ್ದರೆ ಮೂರು ರಾತ್ರಿ ಆಶೌಚವನ್ನು ಬಳಸಬೇಕು. ಸಂಸ್ಕಾರ ಆಗಿದ್ದರೆ ಒಂದು ದಿನ ಆಶೌಚವನ್ನು ಬಳಸಿದರೆ ಸಾಕೆಂದು ಹೇಳಿರುವರು.

---

**ಆಶೌಚ ಸಿದ್ಧಾಂತ:-**
ಶ್ರುತೇ ಪರೋಕ್ಷೇ ಮರಣೇ ಸಪತ್ನಿಮಾತುರ್ದಶಾಹಂ ನತು ವತ್ಸರಾತ್ಪ್ರಾಕ್ ।
ತ್ರ್ಯಹಂ ತು ಪಶ್ಚಾದಕೃತೋರ್ಧ್ವಕರ್ಮಣ್ಯೂರ್ಧ್ವಂ ಕ್ರಿಯಾಯಾಂ ತು ದಿನಂ ಕೃತಾಯಾಮ್ ॥

**ತಾತ್ಪರ್ಯಬೋಧಿನೀ:-** ವತ್ಸರಾತ್ ಪ್ರಾಕ್ ಸಪತ್ನೀಮಾತುಃ ಮರಣಶ್ರವಣೇ ಶ್ರವಣದಿನಮಾರಭ್ಯ ದಶಾಹಮಾಶೌಚಮ್॥ ವತ್ಸರಾದನಂತರಂ ಚೇತ್ ಊರ್ಧ್ವಕ್ರಿಯಾಯಾಂ ಅಕೃತಾಯಾಂ ತ್ರ್ಯಹಮ್ । ಕೃತಾಯಾಂ ತು ಏಕಂ ದಿನಮಿತಿ॥

## ೬. ಅಣ್ಣ ತಮ್ಮಂದಿರ ವಿಚಾರ

ಅಣ್ಣ ಅಥವಾ ತಮ್ಮನ ಮೃತವಾರ್ತೆಯು ಹತ್ತು ದಿವಸಗಳೊಳಗೆ ತಿಳಿದರೆ ಅವಶಿಷ್ಟ ಮೃತಾಶೌಚದಿಂದ ಶುದ್ಧಿಯಾಗುವುದು. ಹತ್ತು ದಿವಸಗಳ ನಂತರ ಆರು ತಿಂಗಳೊಳಗೆ ಮೃತವಾರ್ತೆ ತಿಳಿದರೆ ಸಂಸ್ಕಾರವಾಗಿದ್ದರೆ ಮೂರು ರಾತ್ರಿ ಬಳಸಬೇಕು. ಸಂಸ್ಕಾರವಾಗದಿದ್ದರೆ ಹತ್ತು ರಾತ್ರಿಯ ಆಶೌಚವನ್ನು ಬಳಸಬೇಕು. ಆರು ತಿಂಗಳ ನಂತರ ಸಂಸ್ಕಾರವಾಗಿದ್ದರೆ ಒಂದು ದಿನ, ಸಂಸ್ಕಾರವಾಗದೇ ಇದ್ದರೆ ಮೂರು ರಾತ್ರಿ ಆಶೌಚವನ್ನು ಬಳಸಬೇಕು. ಒಂದು ವರ್ಷದ ನಂತರ ಮೃತವಾರ್ತೆ ಕೇಳಿದರೆ ಸಪಿಂಡರಿಗೆ ವಿಧಿಸಿದಂತೆ ಆಶೌಚವನ್ನು ಬಳಸಬೇಕು. ಮೃತನ ಪತ್ನಿ ಪುತ್ರರಿಗೆ ಸದಾ ಹತ್ತು ದಿವಸ ಆಶೌಚವಿರುತ್ತದೆ.

**ಪೈಠೀನಸಿ:-** ಪ್ರೋಷಿತೇ ಭ್ರಾತೃಮರಣೇ ದತ್ತಪಿಂಡೋದಕಕ್ರಿಯೇ ।
ತ್ರಿರಾತ್ರಂ ಸೂತಕಂ ತತ್ರ ದಶಾಹಂ ಪತ್ನಿಪುತ್ರಯೋಃ ॥

**ಸ್ಮೃತ್ಯಂತರೇ:-** ದೇಶಾಂತರಮೃತಿರ್ಯತ್ರ ತ್ವನುಜಾಗ್ರಜಯೋರ್ಯದಿ ।
ಷಣ್ಮಾಸಾದ್ವತ್ಸರಾದರ್ವಾಕ್ ದಶಾಹಂ ತ್ರ್ಯಹಮಾಚರೇತ್ ॥
ಏತದ್ವಚನಂ ತು ಮನ್ವಾದಿಸ್ಮೃತಿವಿರೋಧಾತ್ ನ ಆಚರಣೀಯಮ್ ॥

ಮನುಃ:- ಅತಿಕ್ರಾಂತೇ ದಶಾಹೇ ತು ತ್ರಿರಾತ್ರಮಶುಚಿರ್ಭವೇತ್ ॥ ಇತ್ಯಾದಿ ವಚನಪ್ರಕಾರೇಣ ಮಾತಾಪಿತ್ರೋರ್ವಿನಾ ಸರ್ವೇಷಾಂ ಸಪಿಂಡಾನಾಂ ತ್ರಿಮಾಸಾದರ್ವಾಕ್ ತ್ರಿದಿನಮಾಶೌಚಮಿತಿ । ಸ್ಮೃತಿಸಾರ ಸರ್ವಸ್ವವ್ಯಾಖ್ಯಾನೇ ವಿಸ್ತರಶಃ ಲಿಖಿತಂ ದ್ರಷ್ಟವ್ಯಮ್ ॥

## ೭ ಸಪಿಂಡರ ವಿಚಾರ

ಸಪಿಂಡ ಜನರಿಗೆ ಮೃತಪಟ್ಟು ಹತ್ತು ದಿವಸದೊಳಗೆ ಮೃತವಾರ್ತೆ ಕೇಳಿದರೆ ಅವಶಿಷ್ಟ ಮೃತಾಶೌಚವನ್ನು ಬಳಸಿದರೆ ಶುದ್ಧಿಯಾಗುವುದು.

ಹತ್ತು ದಿವಸದ ನಂತರ ಮೂರು ತಿಂಗಳೊಳಗೆ ಮರಣವಾರ್ತೆ ಕೇಳಿದರೆ ಮೂರು ರಾತ್ರಿ ಆಶೌಚವನ್ನು ಬಳಸಬೇಕು.

ಮೂರು ತಿಂಗಳ ನಂತರ ಆರು ತಿಂಗಳವರೆಗೆ ಸಪಿಂಡದವರ ಮರಣವಾರ್ತೆ ಕೇಳಿದರೆ ಪಕ್ಷಿಣಿ ಕಾಲ ಆಶೌಚವನ್ನು ಬಳಸಬೇಕು.

ಆರು ತಿಂಗಳ ನಂತರ ಒಂದು ವರ್ಷದೊಳಗೆ ಮೃತವಾರ್ತೆ ಕೇಳಿದರೆ ಒಂದು ರಾತ್ರಿ ಆಶೌಚವನ್ನು ಬಳಸಬೇಕು.

ಒಂದು ವರ್ಷದ ನಂತರ ಮೃತವಾರ್ತೆ ಕೇಳಿದರೆ ಸ್ನಾನದಿಂದ ಶುದ್ಧಿಯಾಗುವುದು.

ವೃದ್ಧ ವಸಿಷ್ಠರು ಒಂಭತ್ತು ತಿಂಗಳ ನಂತರ ಸ್ನಾನದಿಂದ ಶುದ್ಧಿಯೆಂದು ಹೇಳಿದರೂ ಇತರ ಅನೇಕ ಋಷಿಗಳು ಒಂದು ವರ್ಷದವರೆಗೆ ಒಂದು ದಿನ ಆಶೌಚವನ್ನು ಬಳಸಲೇಬೇಕೆಂದು ಹೇಳಿರುವುದು ಯುಕ್ತವಾಗಿದೆಯೆಂದು ತಿಳಿದು ಬರುತ್ತದೆ.

---

**ಆಶೌಚಸಿದ್ಧಾಂತೇ:-**
ಅತೀತಪೂರ್ಣಾವಿದಃ ಸನಾಭೇಃ ತ್ರ್ಯಹಂ ತ್ರಿಮಾಸಾತ್ ತತಃ ಸ್ತ್ರಿಷು ಸ್ಯಾತ್ ।
ಪಕ್ಷಿಣ್ಯಬ್ದಾವಧಿ ಸಪ್ತಮಾದೌ ದಿನಂ ತತೋ ಹ್ಯಾಪ್ಲವನಾದ್ವಿಶುದ್ಧಿಃ ॥

**ತಾತ್ಪರ್ಯಬೋಧಿನೀ:-** ದಶಾಹಾತ್ಪರಂ ತ್ರಿಮಾಸಾದರ್ವಾಕ್ ಅತಿಕ್ರಾಂತಾಶೌಚಜ್ಞಾನೇ ಜ್ಞಾತೇಃ ತ್ರಿರಾತ್ರಮ್ ॥ ತತಃಪರಂ ಷಣ್ಮಾಸಪರ್ಯಂತಂ ಪಕ್ಷಿಣೀ ॥ ಅಥ ಸಪ್ತಮಮಾಸಾದಾವತ್ಸರಂ ಏಕಾಹಮ್ । ಸಂವತ್ಸರಾದನಂತರಂ ಚೇತ್ ಸ್ನಾನಾಚ್ಛುದ್ಧಿರಿತಿ ॥

**ತತಶ್ಲೋಕೇ** :- ತ್ರಿರಾತ್ರಂ ತ್ರಿಷು ಮಾಸೇಷು ಪಕ್ಷಿಣ್ಯೇವ ತತಸ್ತ್ರಿಷು ।
ತತೋಽಹಃ ಷಟ್ಸ್ವಥ ಸ್ನಾನಂ ದಶರಾತ್ರಾತ್ಯಯಶ್ರುತೌ ॥

**ದೇವಲಃ**:- ಆತ್ರಿಮಾಸಾತ್ತ್ರಿರಾತ್ರಂ ಸ್ಯಾತ್ ಷಣ್ಮಾಸಾತ್ಪಕ್ಷಿಣೀ ಭವೇತ್ ।
ಪರಮೇಕಾಹಮಾವರ್ಷಾತ್ ತತಃ ಸ್ನಾತ್ವಾ ವಿಶುಧ್ಯತಿ ॥

**ಯಾಜ್ಞವಲ್ಕ್ಯಃ**:- ಪ್ರೋಷಿತೇ ಕಾಲಶೇಷಃ ಸ್ಯಾತ್ ತಚ್ಛೇಷಂ ತ್ರ್ಯಹಮೇವ ಚ ।
ಸರ್ವೇಷಾಂ ವತ್ಸರೇ ಪೂರ್ಣೇ ಪ್ರೇತೇ ದತ್ವೋದಕಂ ಶುಚಿಃ ॥

**ಮನುಃ**:- ಅತಿಕ್ರಾಂತೇ ದಶಾಹೇ ತು ತ್ರಿರಾತ್ರಮಶುಚಿರ್ಭವೇತ್ ।
ಸಂವತ್ಸರವ್ಯತೀತೇ ತು ಸ್ಪೃಷ್ಟ್ವೈವಾಪೋ ವಿಶುಧ್ಯತಿ ॥

**ಜಾಬಾಲಿಃ** :- ಅತೀತೇ ಸೂತಕೇ ಸ್ವೇಸ್ವೇ ತ್ರಿರಾತ್ರಮಶುಚಿರ್ಭವೇತ್ ।

**ಸ್ಮೃತ್ಯಂತರೇ** :- ದಶಾಹಾದ್ಯತಿಪತ್ತೌ ತು ದಶಾಹಾದಿ ದಿನಕ್ರಮಾತ್ ।
ತ್ರಿರಾತ್ರಂ ಪಕ್ಷಿಣ್ಯೇಕಾಹ ಸದ್ಯಃ ಶೌಚಾಃ ಪ್ರಕೀರ್ತಿತಾಃ ॥

**ವಿಷ್ಣುಃ** :- ವೀತೇತ್ವಾಽಶೌಚೇ ಸಂವತ್ಸರಾಂತಂ ತ್ವೇಕರಾತ್ರೇಣ ।ಇತಿ।

**ವೃದ್ಧ ವಸಿಷ್ಠಃ** :- ಮಾಸತ್ರಯೇ ತ್ರಿಮಾಸಂ ಸ್ಯಾತ್ ಷಣ್ಮಾಸೇ ಪಕ್ಷಿಣೀ ತಥಾ ।
ಅಹಸ್ತು ನವಮಾದರ್ವಾಕ್ ಊರ್ಧ್ವಂ ಸ್ನಾನೇನ ಶುಧ್ಯತಿ ॥

## ೮. ಸಕುಲ್ಯಾದಿಗಳ ವಿಚಾರ

ಮೃತಪಟ್ಟ ಮೂರುದಿನಗಳೊಳಗೆ ಮೃತವಾರ್ತೆ ಕೇಳಿದರೆ, ಮೂರು ರಾತ್ರಿಗಳಿಗೆ ಸರಿಯಾದ ಅವಶಿಷ್ಟ ದಿವಸ ಬಳಸಿದರೆ ಶುದ್ಧಿಯಾಗುವುದು.

ಪಕ್ಷಿಣೀ ಆಶೌಚದವರು ಹತ್ತು ರಾತ್ರೆಯೊಳಗೆ ವಾರ್ತೆ ಕೇಳಿದರೆ ಸಜ್ಯೋತಿ ಕಾಲ ಆಶೌಚವನ್ನು ಬಳಸಬೇಕು. ನಂತರ ವಾರ್ತೆ ಕೇಳಿದರೆ, ಸ್ನಾನದಿಂದ ಶುದ್ಧಿಯನ್ನು ಹೇಳಿದೆ.

ಇನ್ನುಳಿದ ಒಂದು ದಿನ ಬಳಸುವವರು, ಸಜ್ಯೋತಿಕಾಲ ಬಳಸುವವರು ಮೊದಲಾದವರು ಸ್ನಾನದಿಂದ ಶುದ್ಧಿಯಾಗುವರೆಂದು ಹೇಳಿದೆ.

ಸಜ್ಯೋತಿ ಶಬ್ದಾರ್ಥವನ್ನು ಹಿಂದೆ ಬಾಲಮರಣದ ಏಳನೇ ಸಂಖ್ಯೆಯಲ್ಲಿ ತಿಳಿಸಿದೆ. ಅಲ್ಲಿಂದ ತಿಳಿಯಿರಿ. ಮತ್ತೆ ಇಲ್ಲಿ ಬರೆಯುವುದಿಲ್ಲ.

## ೯. ಪಕ್ಷಿಣೀ ಶಬ್ದಾರ್ಥ

ಇಂದು ಹಗಲಿನ ಸಮಯ (ದಿವಾ ಭಾಗ) ದಲ್ಲಿ ಒಂದು ಪಕ್ಷಿಣೀ ಆಶೌಚ ಬಂದರೆ, ಇಂದಿನ ಹಗಲು, ಹಾಗೆಯೇ ಇಂದಿನ ಸಂಪೂರ್ಣ ರಾತ್ರೆ, ನಾಳಿನ ಹಗಲು, (ಸಂಪೂರ್ಣ ದಿವಾ ಭಾಗ) ಸೇರಿಸಿದ ಇಂದಿನ ರಾತ್ರೆಯು ಪಕ್ಷಿಣೀ ಎಂದು ಹೇಳಿದೆ.

ಹಾಗೆಯೇ ಇಂದಿನ ರಾತ್ರಿ ಮರಣ ಪಟ್ಟರೆ, ಇಂದಿನ ವರ್ತಮಾನ ರಾತ್ರಿ, ನಾಳಿನ ಹಗಲು, ನಾಳಿನ ರಾತ್ರಿ ಸಂಪೂರ್ಣ ಸೇರಿಸಿದ ಮಧ್ಯದ ನಾಳಿನ ಹಗಲು ಪಕ್ಷಿಣೀ ಕಾಲವೆಂದು ಶಾಸ್ತ್ರದಲ್ಲಿ ಹೇಳಿದೆ. ಮಾರನೇ ದಿವಸದ ಹಗಲು ಅಥವಾ ರಾತ್ರಿಯು (ಏಕದೇಶ) ಸ್ವಲ್ಪ ಮಟ್ಟಿಗೆ ಸೇರಿದರೆ ಸಾಲದು. ಸಂಪೂರ್ಣ ಹಗಲಿನ ಸಮಯ ಅಥವಾ ರಾತ್ರಿಯ ಸಮಯ ಸೇರಬೇಕೆಂಬುದೇ ನಿರ್ಣಯವಾಗಿರುತ್ತದೆ.

ಸ್ಮೃತಿಸಾರಸಮುಚ್ಚಯದಲ್ಲಿ ಲಲ್ಲ ಎಂಬುವನು ನಾಳಿನ ಸ್ವಲ್ಪ ಸಮಯ ಸೇರಿದರೂ ಸಾಕು ಮಾರನೇ ದಿವಸ ಪಕ್ಷಿಣೀ ಆಶೌಚವು ಶುದ್ಧಿಯಾಗುವುದೆಂದು ಹೇಳಿರುವನು. ಆದರೆ, ಧರ್ಮಸಿಂಧು ಮೊದಲಾದ ಅನೇಕ ಗ್ರಂಥಗಳಲ್ಲಿ ಸ್ವಲ್ಪ ಸಮಯ ಸೇರುವಿಕೆ (ಏಕ ದೇಶವ್ಯಾಪ್ತಿ) ಯ ಪಕ್ಷವನ್ನು ನಿಷೇಧಿಸಿ ಸೂರ್ಯಾಸ್ತ ನಕ್ಷತ್ರೋದಯದವರೆಗೂ ಅಥವಾ ಪರದಿನ ಸೂರ್ಯೋದಯದವರೆಗೂ ಪಕ್ಷಿಣೀ ಆಶೌಚವನ್ನು ಬಳಸಬೇಕೆಂದು ಸ್ಪಷ್ಟಪಡಿಸಿರುವರು. ಆದ್ದರಿಂದ ಈ ಹೊತ್ತು ಪಕ್ಷಿಣೀ ಆಶೌಚ ಬಂದರೆ ನಾಳೆ ಬೆಳಿಗ್ಗೆ ಸ್ನಾನ ಮಾಡಿ, ನಾಳೆ ಮಧ್ಯಾಹ್ನ ಶ್ರಾದ್ಧಾದಿ ಕರ್ಮಗಳನ್ನು ಮಾಡುವಂತಿಲ್ಲ. ನಾಳೆ ಸೂರ್ಯಾಸ್ತದವರೆಗೂ ಆಶೌಚವನ್ನು ಬಳಸಿ, ರಾತ್ರಿ ಶ್ರಾದ್ಧವು ನಿಷೇಧವಾದ್ದರಿಂದ, ನಾಡಿದ್ದು ಶ್ರಾದ್ಧಾದಿಗಳನ್ನು ನಡೆಸಬೇಕು. ಸಂಕಷ್ಟಚತುರ್ಥಿ ಪೂಜೆ, ಮೊದಲಾದ ರಾತ್ರಿ ನಡೆಸುವ ಕರ್ಮಗಳನ್ನು ನಾಳೆ ಸಾಯಂಕಾಲ ಸ್ನಾನ ಮಾಡಿ ನಡೆಸಬಹುದು.

ಕೆಲವರು ಒಂದೂವರೆ ದಿವಸವೆಂದೂ ಅಥವಾ ತೊಂಭತ್ತು ಘಟೀ ವೇಳೆಯೆಂದು ಹೇಳುವರು. ಒಂದು ಹೊತ್ತು ಅಥವಾ ಅರ್ಧ ದಿವಸವೆಂದರೆ, ಹನ್ನೆರಡು ತಾಸು ಅಥವಾ ಮೂವತ್ತು ಘಟೀ ಎಂದು ತಿಳಿಯಬೇಕು. ಆದ್ದರಿಂದ ಈ ಎಲ್ಲಾ ಹೇಳಿಕೆಗಳು ಒಂದೇಯಾಗಿರುತ್ತವೆ. ಆದ ಕಾರಣ ಈ ಹೊತ್ತು ಹಗಲು ಪಕ್ಷಿಣೀ ಆಶೌಚ ಬಂದರೆ ನಾಳೆ ಸಾಯಂಕಾಲವೇ ಶುದ್ಧಿಯಾಗುವುದು. ಈ ಹೊತ್ತು ರಾತ್ರಿ ಪಕ್ಷಿಣೀ ಆಶೌಚ ಬಂದರೆ ನಾಡಿದ್ದು ಸೂರ್ಯೋದಯಕ್ಕೆ ಶುದ್ಧಿಯಾಗುವದೆಂದು ತಿಳಿಯಬೇಕು.

---

**ಅಮರಕೋಶೇ:**- ಆಗಾಮೀ, ವರ್ತಮಾನಾಹರ್ಯುಕ್ತಾಯಾಂ, ನಿಶಿ ಪಕ್ಷಿಣೀ । ಇತಿ

**ಸ್ಮೃತಿಸಾರಸಮುಚ್ಚಯೇ ಲಲ್ಲಃ** :- ಪರೇದ್ಯುಃ ಸ್ನಾನಮಾತ್ರೇಣ ಪಕ್ಷಿಣ್ಯಾಂ ಪರಿಶುದ್ಧ್ಯತಿ ಇತಿ

**ಧರ್ಮಸಿಂಧು** :- ಪಕ್ಷಿಣೀ ಪದಾರ್ಥಸ್ತು ದಿವಾಮರಣೇ ಸ ದಿವಸಃ ಸಾ ರಾತ್ರಿಃ ದ್ವಿತೀಯಂ ದಿವಸ ನಕ್ಷತ್ರ ದರ್ಶನ ಪರ್ಯಂತಮಿತಿ॥ ಆಗಾಮಿ ವರ್ತಮಾನಾಹರ್ಯುಕ್ತಾಯಾಂ ನಿಶಿ ಪಕ್ಷಿಣೀತ್ಯನೇನ ಆಗಾಮಿ ವರ್ತಮಾನಾಹರ್ದ್ವಯಯುತಾ ಮಧ್ಯಗತಾ ರಾತ್ರಿಃ। ರಾತ್ರಿಮರಣೇ ಸಾ ರಾತ್ರಿಃ ತದುತ್ತರಮಹೋರಾತ್ರಶ್ಚೇತಿ ಪಕ್ಷಿಣೀ।

ಇತ್ಯತಿಕ್ರಾಂತಾಽಶೌಚಮ್ ।

॥ ಚತುರ್ಥ ನಿರ್ಣಯವು ಮುಗಿಯಿತು ॥

# ಅಥ ಪಂಚಮ ನಿರ್ಣಯಃ

## ೧. ಸಂಪಾತವೆಂದರೇನು ? ( ಸಂಪಾತ ಶಬ್ದಾರ್ಥವು)

ಮೊದಲೊಂದು ಆಶೌಚವನ್ನು ಬಳಸುತ್ತಿರುವಾಗ, ಅದರ ಮಧ್ಯದಲ್ಲಿ ಇನ್ನೊಂದು ಆಶೌಚವು ಬಂದಿದ್ದು, ಅದರ ಜ್ಞಾನವಾಗುವುದೇ ಸಂಪಾತವೆನಿಸುವುದು. ಮೊದಲು ಬಳಸುತ್ತಿರುವ ಆಶೌಚದ ಮಧ್ಯದಲ್ಲಿ ಮತ್ತೊಂದು ಆಶೌಚವೂ ಉತ್ಪನ್ನವಾಗಿ ಮೊದಲಿನ ಆಶೌಚದ ಅಂತ್ಯದೊಳಗೆ, ಅಂದರೆ ಹತ್ತು ರಾತ್ರಿಯೊಳಗೆ ಎರಡನೇ ಆಶೌಚವು ಬಂದಿದ್ದು ತಿಳಿದರೆ ಅಥವಾ ಜ್ಞಾನವಾದರೆ ಮಾತ್ರ ಮೊದಲನೇ ಆಶೌಚದಿಂದಲೇ ಶುದ್ಧಿಯಾಗುವುದು.

ಮೊದಲನೇ ಆಶೌಚದ ಮಧ್ಯದಲ್ಲಿಯೇ ಎರಡನೇ ಆಶೌಚವು ಉತ್ಪನ್ನವಾಗಿದ್ದರೂ ಸಹ ಮೊದಲನೇ ಆಶೌಚದ ಶುದ್ಧಿಯ ನಂತರ ಅಂದರೆ ಹನ್ನೊಂದನೇ ದಿವಸ, ಹನ್ನೆರಡನೇ ದಿವಸ ಹೀಗೆ, ತಿಳಿದು ಬಂದರೆ ಆ ಎರಡನೇ ತಿಳಿದ ಆಶೌಚವನ್ನು ಅದರ ಅಂತ್ಯದವರೆಗೂ (ಅವಶಿಷ್ಟ ದಿವಸ) ಬಳಸಲೇ ಬೇಕು. ಯಾಕೆಂದರೆ ಆಶೌಚವು ಉತ್ಪನ್ನವಾದದ್ದು ತಿಳಿದರೆ ಮಾತ್ರ (ಜ್ಞಾನವಾದರೆ ಮಾತ್ರ) ಬಳಕೆಗೆ (ಆಚರಣೆಗೆ) ಬರುತ್ತದೆ. ಮೊದಲನೇ ಆಶೌಚದ ಅಶುಚಿತ್ವ ಜ್ಞಾನದಲ್ಲಿ ಎರಡನೇ ಆಶೌಚದ ಅಶುಚಿತ್ವ ಜ್ಞಾನವಾಗುವದೇ (ತಿಳಿಯುವುದೇ) ಸಂಪಾತ ಶಬ್ದಾರ್ಥವಾಗಿದೆ. ಆದ್ದರಿಂದ ಎರಡೂ ಆಶೌಚದ ಜ್ಞಾನವು (ತಿಳಿಯುವಿಕೆ, ತಿಳಿವು) ಒಂದೆಡೆ ಸೇರುವುದರಿಂದ ಮೊದಲನೇ ಆಶೌಚದ ಶುದ್ಧಿಯ ವೇಳೆಗೆ ಎರಡನೆಯದಾಗಿ ಬಂದ ಆಶೌಚವೂ ಶುದ್ಧಿಯಾಗುವುದು. ನಿಮಿತ್ತದಿಂದ (ಉತ್ಪತ್ತಿಯಿಂದ) ಆಶೌಚವೂ ಬರುವದಾದರೂ, ತಿಳಿದ ಮೇಲೆಯೇ (ಜ್ಞಾನವಾದ ಮೇಲೇಯೇ) ಆಚರಣೆಗೆ ಬರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಉತ್ಪತ್ತಿಯ (ನಿಮಿತ್ತದ) ಜ್ಞಾನವಾಗದಿದ್ದರೆ ನಾನು ಅಶುಚಿ ಎಂಬ ಕಲ್ಪನೆಯೇ ಸಂಭವಿಸುವದಿಲ್ಲವೆಂದು ತಿಳಿಯಬೇಕು. ಅದರಿಂದ ಮೊದಲನೇ ಆಶೌಚದ ಅಂತ್ಯದೊಳಗೆ (ಹತ್ತು ರಾತ್ರಿ ಕಳಿಯುವುದರೊಳಗೆ) ಇನ್ನೊಂದು ಆಶೌಚದ ತಿಳಿವಳಿಕೆಯಾದರೆ ಮಾತ್ರ ಸಂಪಾತವಾಗುವದು. ತಿಳಿವಳಿಕೆಯಾಗದಿದ್ದರೆ ಸಂಪಾತವೇ ಆಗುವುದಿಲ್ಲ.

ಆಶೌಚದ ಆಚರಣೆಯೂ ಜ್ಞಾನಕೃತವೇ ಹೊರತು ಉತ್ಪತ್ತಿಕೃತವಲ್ಲವೆಂದು ಅರಿಯಬೇಕು. ಕೆಲವು ಮಹನೀಯರು ಮೊದಲಿನ ಆಶೌಚದ ಮಧ್ಯದಲ್ಲಿ ಇನ್ನೊಂದು ಆಶೌಚವು ಉತ್ಪತ್ತಿಯಾದರೂ ಸಾಕು ಅದು ಯಾರಿಗೂ

ತಿಳಿಯದಿದ್ದರೂ ಸಹ ಸಂಪಾತವಾಗಿ ಮೊದಲಿನ ಆಶೌಚದಿಂದಲೇ ಶುದ್ಧಿಯಾಗುವದೆಂದು ವಾದ ಹೂಡುವರು. ಅವರ ಮತದಂತೆ ಕೇವಲ, ಉತ್ಪತ್ತಿ ಮಾತ್ರದಿಂದಲೇ ಸಂಪಾತ ಶಬ್ದಾರ್ಥವು ಸರಿಯಾಗುವುದು.

ಹಾಗಾದರೆ ಒಂದು ಪ್ರಶ್ನೆ ? – ಉತ್ಪತ್ತಿಯು ಯಾರಿಗೂ ಏನೂ ಗೊತ್ತಾಗದಿದ್ದರೂ ಮೊದಲಿನ ಆಶೌಚದಲ್ಲಿ ಸಂಪಾತವಾಗಿ ಆಚರಣೆಗೆ ಬರುತ್ತದೆ ಅಂತಾದರೆ, ತಿಳಿಯುವ ಪೂರ್ವದಲ್ಲಿ (ಜ್ಞಾನ ಪೂರ್ವ ಕಾಲದಲ್ಲಿ) ನಡೆಸಿದ ಧರ್ಮಕರ್ಮಗಳಿಗೆ ಗತಿ ಏನು ? ಆ ಧರ್ಮಕರ್ಮವು ಆಶೌಚದಲ್ಲಿಯೇ ಆಚರಿಸಿದಂತೆ ಆಗುವದಿಲ್ಲವೇ ? ಆ ಕರ್ಮವು ಭ್ರಷ್ಟವೇ? ಪುನಃ ಆಚರಿಸಬೇಕೆ? ಎಲ್ಲಿಯಾದರೂ ಈ ರೀತಿಯ ವ್ಯವಹಾರ ಉಂಟೇ? ಆವಾಗಲೇ ಆಶೌಚವು ಬಂದಿದ್ದರೂ ತಿಳಿದ ಮೇಲೆಯೇ ಅಶುಚಿಯಾಗುತ್ತಾನೆ ಎಂಬ ಮನ್ವಾದಿ ಸ್ಮೃತಿಗಳನ್ನು ಏನು ಮಾಡಬೇಕು.? ಇದಕ್ಕೆ ಸರಿಯಾದ ಉತ್ತರವುಂಟೇ ?

ಮತ್ತೆ ಕೆಲವರು ಆಶೌಚ ಬಂದದ್ದು ನಾಲ್ಕೆಂಟು ಜನರಿಗೆ ಗೊತ್ತಾದರೂ ಸಾಕು ಎಲ್ಲರಿಗೂ ಶುದ್ಧಿಯಾಗುವದೆಂದು ದುರ್ವಾದ ಹೂಡುವರು. ಇವರನ್ನು ಧರ್ಮಶಾಸ್ತ್ರದ ಲೇಶ ಮಾತ್ರವೂ ಜ್ಞಾನವಿಲ್ಲದ ಭ್ರಾಂತರೆಂದೇ ಕರೆಯಬೇಕು. ಯಾಕೆಂದರೆ ಇಂತಹವರ ಮಾತು ಎಲ್ಲಾ ಸ್ಮೃತಿಗಳಿಗೂ ವಿರೋಧವಾಗುವುದು. ಇವರ ಬಗ್ಗಾಗಿಯೇ ಹೊಸ ಸ್ಮೃತಿಗಳನ್ನು ರಚಿಸುವ ಪ್ರಸಂಗ ಬರುವುದು. ಸಂಪಾತ ಆಶೌಚದ ವ್ಯವಸ್ಥೆಯೇ ಹಾಳಾಗುವುದು. ಮತ್ತು ಎಲ್ಲಿಯೋ ನಾಲ್ಕೆಂಟು ಜನರು ಉಂಡರೆ ಎಲ್ಲರಿಗೂ ಹಸಿವು ಪರಿಹಾರವಾಗುವುದೆಂದು ವಾದಿಸಿದಷ್ಟೇ ಮೂರ್ಖತನವಾದೀತು. ಮಹರ್ಷಿಗಳು ಹೇಳಿದ ಮರಣಾತಿಕ್ರಾಂತ ಆಶೌಚದ ವ್ಯವಸ್ಥೆಯನ್ನು ತೆಗೆದು ಹಾಕಬೇಕಾದೀತು.

ಕೆಲವರು ವಿದ್ವಾಂಸರು ಪಾತ ಶಬ್ದವು ಗತವೆಂಬ ಅರ್ಥವಾದ್ದರಿಂದ ಉತ್ಪತ್ತಿಯ ಪಾತವಾದರೂ ಸಾಕು ಶುದ್ಧಿಯಾಗುವದೆಂದು ವಾದಿಸುವರು. ಆದರೆ, ವ್ಯಾಕರಣ ಶಾಸ್ತ್ರದಲ್ಲಿ ಯಾವ ಧಾತುವು 'ಗತ'ವೆಂಬ ಅರ್ಥವನ್ನು ಕೊಡುವದೋ ಆ ಧಾತುವು ಜ್ಞಾನವೆಂಬ ಅರ್ಥವನ್ನೂ ಕೊಡುತ್ತದೆಯೆಂದು ತಿಳಿಯಬೇಕು. ಮಾತ್ರವಲ್ಲ ಉಪಸರ್ಗದ ಬಲದಿಂದ ಬೇರೆ ಬೇರೆ ಅರ್ಥಗಳೂ ಕೂಡಿಬರುತ್ತವೆ ಎಂದು ಅರಿತುಕೊಳ್ಳಬೇಕು. ಆದ್ದರಿಂದ ಏಕಾಶೌಚಿತ್ವಜ್ಞಾನೇ, ಪರಾಶೌಚಿತ್ವ ಜ್ಞಾನಂ ಸಂಪಾತಃ ॥ ಒಂದು ಆಶೌಚದ ಜ್ಞಾನದಲ್ಲಿ ಇನ್ನೊಂದು ಆಶೌಚತ್ವದ ಜ್ಞಾನವಾಗುವದೇ ಸರಿಯಾದ (ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವ, ದೋಷತ್ರಯರಹಿತವಾದ) ಸಂಪಾತ ಶಬ್ದಾರ್ಥವೆಂದು ತಿಳಿಯಬೇಕು. ಆದ ಕಾರಣ ಒಂದರಲ್ಲಿ ಇನ್ನೊಂದು ಕೂಡುವ ಆಶೌಚ ವಿಷಯದಲ್ಲಿ (ಸಂಪಾತದಲ್ಲಿ) ನಿರ್ಣಯ ಹೇಳುವವರು ಸಮಾಧಾನ ಚಿತ್ತದಿಂದ ವಿವೇಚಿಸಿ (ಅಸ್ತವ್ಯಸ್ತಗೊಳಿಸದೇ) ಸರಿಯಾಗಿ ನಿರ್ಣಯ ಹೇಳಬೇಕೆಂದು ನಮ್ರವಾದ ಪ್ರಾರ್ಥನೆ ಇದೆ. ಯಾಕೆಂದರೆ

ಧರ್ಮಶಾಸ್ತ್ರವು ಆಚಾರಪ್ರಧಾನವಾದ್ದರಿಂದ ಹೇಳಿದ ಕೂಡಲೇ ಆಚರಣೆಗೆ ಬಂದು ಬಿಡುತ್ತದೆ. ನಂತರ ಏನೂ ಮಾಡಲಾಗುವುದಿಲ್ಲವೆಂದು ತಿಳಿಯಬೇಕು.

---

**ಧರ್ಮಸಿಂಧು:**– ಸಂಪಾತೋ ನಾಮ ಆಶೌಚೇನಾಂ ಏಕಾಶೌಚಿತ್ವಜ್ಞಾನೇ ಪರಾಶೌಚಿತ್ವಜ್ಞಾನಮ್, ತೇನ ಪೂರ್ವಾಶೌಚಮಧ್ಯೇ ಉತ್ಪನ್ನಮಪಿ ಪರಾಶೌಚಂ ಪೂರ್ವಾಶೌಚಾಂತೇ ಜ್ಞಾತಂ ಚೇತ್ ಪೂರ್ವೇಣ ನ ನಿವರ್ತತೇ । ಸಂಪಾತಾಭಾವಾತ್ । ಪೂರ್ವತ್ವಪರತ್ವೇ ತು ಉತ್ಪತ್ತಿಕೃತೇ ನ ಜ್ಞಾನಕೃತೇ । ತೇನ ಪೂರ್ವೋತ್ಪನ್ನಸ್ಯ ಪರೋತ್ಪನ್ನಜ್ಞಾನೋತ್ತರಂ ಜ್ಞಾನೇಽಪಿ ಪೂರ್ವೋತ್ಪನ್ನೇನ ಪರೋತ್ಪನ್ನಂ ತನ್ಮಧ್ಯೇ ಜ್ಞಾತಂ ಚೇತ್ ನಿರ್ವತತ ಏವ । ಸಂಪಾತ ಏವ ಜ್ಞಾನಕೃತಃ ನ ತು ಪೂರ್ವತ್ವಾದಿಕೃತಮಿತಿ ಸಿದ್ಧಾಂತಾತ್ ।

**ಯಾಜ್ಞವಲ್ಕ್ಯ:**– ಅಂತರಾ ಜನ್ಮಮರಣೇ ಶೇಷಾಹೋಭಿರ್ವಿಶುದ್ಧ್ಯತಿ ।

**ನಿರ್ಣಯ ಸಿಂಧೌ:**– ಅಂತರಾ–ಜ್ಞಾತೇ ಇತ್ಯರ್ಥಃ। ಜ್ಞಾತಸ್ಯೈವ ಜನನಾದೇಃ ನಿಮಿತ್ತತ್ವಾತ್ । ಪೂರ್ವಾಶೌಚೋತ್ತರಂ ತನ್ಮಧ್ಯೋತ್ಪನ್ನೇ ಜ್ಞಾತೇ ತು ಉತ್ತರಮೇವ ಕಾರ್ಯಮ್ ।

**ಅನ್ಯತ್ರ**:– ದಶಾಹಮಧ್ಯೇ ಯದಿ ಶ್ರುತಂ ಚೇತ್ ಪೂರ್ವೇಣ ನಿರ್ಗಚ್ಛತಿ ಇತಿ ।

**ಶುದ್ಧಿತತ್ವೇ:**– ಪೂರ್ವಾಶೌಚಾಂತಃ ಉತ್ಪನ್ನಂ ಸಮಾನಂ ಲಘುವಾ ನಿಮಿತ್ತಂ ತತ್ ಕಾಲಾದುಪರಿ ಶ್ರುತಂ ಚೇತ್ ಸಾಶೌಚಹೇತುರೇವ ।

**ಗೋಕರ್ಣದ ವೆಂ (ಅಣ್ಣ):–ಪಂಡಿತರ ತಾತ್ಪರ್ಯ ಭೋಧಿನೀ ವ್ಯಾಖ್ಯಾದಲ್ಲಿ** 'ಸಂಪಾತಶ್ಚಾತ್ರ ಏಕಾಶೌಚಿತ್ವಜ್ಞಾನೇ, ಪರಾಶೌಚಿತ್ವಜ್ಞಾನಮ್ ಇತ್ಯವಗಂತವ್ಯಮ್'। ಸರ್ವತ್ರ ಹಿ ಜ್ಞಾತಮೇವ ಆಶೌಚಂ ಅಶುಚಿತ್ವಾಪಾದಕಂ ಭವತಿ। ನ ತು ಉತ್ಪನ್ನಮಾತ್ರೇಣ ಇತಿ (ಸ್ಪಷ್ಟೋಽರ್ಥಃ) ॥

**ಸ್ಮೃತಿಸಾರಸರ್ವಸ್ವ :**– ಏತಚ್ಚ ಅಘಂ ಜ್ಞಾತಮೇವ ಕರ್ಮಾಽನರ್ಹಕೃದ್ಭವತಿ। ಶೃಣುಯಾದ್ಯೋ ಹ್ಯನಿರ್ದಶಮ್। ಶ್ರುತ್ವಾ ತದ್ದಿನಮಾರಭ್ಯ । ಜ್ಞಾತ್ವಾ ತದ್ದಿನಮಾರಭ್ಯ । ಜ್ಞಾನಾತ್ಸಮಾಚರೇಚ್ಛೌಚಮ್ ॥ ಇತಿ ಮನ್ವಾದಿಭಿಃ ಜ್ಞಾನೋತ್ತರಕಾಲಮೇವ ಆಶೌಚವಿಧಾನಾತ್ ॥ ಇತ್ಯಾದಿ ಸ್ಮೃತಿ ವಾಕ್ಯಾನಿ ದ್ರಷ್ಟವ್ಯಾನಿ ಇತಿ ॥

## ೨. ಆಶೌಚ ಸಂಪಾತವಾಗುವ ರೀತಿಗಳು

೧. ಒಂದು ಜನನಾಶೌಚದಲ್ಲಿ, ಇನ್ನೊಂದು ಜನನಾಶೌಚವು ಕೂಡುವುದು

೨. ಮರಣಾಶೌಚದಲ್ಲಿ ಇನ್ನೊಂದು ಮರಣಾಶೌಚವು ಕೂಡುವುದು

೩. ಜನನಾಶೌಚದಲ್ಲಿ ಮತ್ತೊಂದು ಮರಣಾಶೌಚವು ಕೂಡುವುದು

೪. ಮರಣಾಶೌಚದ ಮಧ್ಯದಲ್ಲಿ ಮತ್ತೊಂದು ಜನನಾಶೌಚವು ಕೂಡುವುದು

**ಅಥ ಪಂಚಮ ನಿರ್ಣಯಃ**

ಹೀಗೆ ನಾಲ್ಕು ವಿಧದಿಂದ ಆಶೌಚವು ಸಂಪಾತ[illegible] (ಕೂಡಿಬೀಳುವದು) ಇವುಗಳಲ್ಲಿ ಸಮಾನವಾದ ಅಥವಾ ಲಘುವಾದ ಆಶೌಚವು ಸಂಪಾತವಾದರೆ (ಕೂಡಿಬಿದ್ದರೆ) ಮೊದಲು ಬಂದ ಆಶೌಚದಿಂದಲೇ ಶುದ್ಧಿಯಾಗುವುದು. ಆದರೆ, ಸಮಾನವಾದ ಎಂದರೆ ಏನು ? ಮತ್ತು ಗುರು ಲಘು ಆಶೌಚವೆಂದರೇನು ? ಹತ್ತು ರಾತ್ರಿಗೆ ಹತು ರಾತ್ರಿಯೂ ಸಮವೆಂದರೆ ಜನನಾಶೌಚದಲ್ಲಿ ಮರಣಾಶೌಚವೂ ಶುದ್ಧಿಯಾಗಬೇಕಾದೀತು. ಆದ್ದರಿಂದ ಇಲ್ಲಿ ಗುರು ಲಘು ಆಶೌಚವನ್ನು ವಿವೇಚಿಸಿ ಗುರು ಆಶೌಚದಿಂದ ಲಘು ಆಶೌಚವನ್ನು ತೊಳೆದುಕೊಳ್ಳಬೇಕು. (ಪರಿಹರಿಸಿಕೊಳ್ಳಬೇಕು).

ಹತ್ತು ದಿವಸದ ಜನನಾಶೌಚದಲ್ಲಿ ಮತ್ತೊಂದು ಹತ್ತು ದಿವಸದ ಜನನಾಶೌಚವು ಸಂಪಾತವಾದರೆ ಮೊದಲನೇ ಜನನಾಶೌಚದಿಂದಲೇ ಶುದ್ಧಿಯಾಗುವುದು.

ಹತ್ತು ದಿವಸದ ಮರಣಾಶೌಚದಲ್ಲಿ ಮತ್ತೊಂದು ಹತ್ತು ದಿವಸದ ಮರಣಾಶೌಚವು ಸಂಪಾತವಾದರೆ ಮೊದಲನೇ ಮರಣಾಶೌಚದಿಂದಲೇ ಶುದ್ಧಿಯಾಗುವುದು.

ಹತ್ತು ದಿವಸದ ಜನನಾಶೌಚದಲ್ಲಿ, ಹತ್ತು ದಿವಸದ ಮರಣ ಆಶೌಚವು ಸಂಪಾತವಾದರೆ ಮರಣಾಶೌಚದಿಂದಲೇ ಶುದ್ಧಿಯಾಗುವುವುದು.

ಹತ್ತು ದಿವಸದ ಮರಣಾಶೌಚದ ಮಧ್ಯದಲ್ಲಿ ಮತ್ತೊಂದು ಹತ್ತು ದಿವಸದ ಜನನಾಶೌಚವು ಸಂಪಾತವಾದರೆ ಮರಣಾಶೌಚದಿಂದಲೇ ಶುದ್ಧಿಯಾಗುವುದು.

ಗುರು ಆಶೌಚವು ಮೊದಲು ಬಂದು ನಂತರ ಲಘು ಆಶೌಚವು ಸಂಪಾತವಾದರೆ ಗುರು ಆಶೌಚದಿಂದಲೇ ಶುದ್ಧಿಯೆಂದು ತಿಳಿಯಬೇಕು. ಹತ್ತು ರಾತ್ರಿಯ ದೊಡ್ಡ ಆಶೌಚಗಳಲ್ಲಿ ಮೂರು ರಾತ್ರಿಯಾದಿ ನ್ಯೂನಕಾಲದ ಆಶೌಚಗಳೂ ಹೋಗಿಯೇ ಹೋಗುವವು. (ಯಾವ ಸಂಶಯವೂ ಇಲ್ಲ).

ಈ ಮೇಲೆ ಹೇಳಿದ ವಿಷಯಗಳು ಸಪಿಂಡ ಸಕುಲ್ಯಾದಿ ಜನರಿಗೆ ಮಾತ್ರ ಸೀಮಿತವಾದವುಗಳು ಎಂದು ತಿಳಿಯಬೇಕು. ಇದು ಆಶೌಚಗಳ ಸಾಮಾನ್ಯ ವ್ಯವಸ್ಥೆಯಾಗಿದೆ. ಗುರು ಲಘು ವಿಷಯಗಳನ್ನು ಮತ್ತು ವಿಶೇಷ ವಿಷಯಗಳನ್ನು ಮುಂದೆ ವಿವರಿಸಲಾಗುವದು.

---

**ನಿರ್ಣಯಸಿಂಧೌ:**– ಅತ್ರ ಸಂಪಾತಶ್ಚ ಚತುರ್ಧಾ ಭವತಿ. ॥೩॥ ಜನನೇ ॥೧॥ ಜನನೇ ಜನನಂ, ॥೨॥ ಮರಣೇ ಮರಣಮ್, ॥೩॥ ಜನನೇ ಮರಣಮ್, ॥೪॥ ಮರಣೇ ಜನನಮ್, ಇತಿ ಅತ್ರ ಸಮಾನೇ ಸಮಾನಂ ದಶಾಹಮಧ್ಯೇ ಶ್ರುತಂ ಚೇತ್ ಪೂರ್ವೇಣ ನಿರ್ಗಚ್ಛತಿ । ನ ತ್ವಧಿಕಗ್ರಹಣಮ್ ಇತಿ ।

**ಸ್ಮೃತ್ಯಂತರೇ**:–ಸೂತಕೇ ವರ್ತಮಾನೇಷು ದ್ವಿತೀಯಂ ಸೂತಕಂ ಪತೇತ್ ।
ಪೂರ್ವೇಣೈವ ವಿಶುದ್ಧಿಃ ಸ್ಯಾತ್ ಜಾತೇ ಜಾತಂ ಮೃತೇ ಮೃತಮ್ ॥

**ದಕ್ಷಃ**:– ಸೂತಕೇ ಮೃತಕೇ ಚೈವ ತಥೈವ ಮೃತಸೂತಕೇ ।
ಏವಂ ಸಂಯುಕ್ತಾಶೌಚಾನಾಂ ಶಾವಾ ಶೌಚೇನ ಶುಧ್ಯತಿ ॥

**ಮನುಃ**:–ಅಂತರ್ದಶಾಹೇ ಸ್ಯಾತಾಂ ಚೇತ್ ಪುನರ್ಮರಣಜನ್ಮನೀ ।
ತಾವತ್ಸ್ಯಾದಶುಚಿರ್ವಿಪ್ರಃ ಯಾವತ್ತತ್ಸ್ಯಾದನಿರ್ದಶಮ್ ॥

**ಯಾಜ್ಞವಲ್ಕ್ಯಃ**:– ಅಂತರಾ ಜನ್ಮಮರಣೇ ಶೇಷಾಹೋಭಿರ್ವಿಶುಧ್ಯತಿ ॥

**ಸ್ಮೃತಿಸಾರಸರ್ವಸ್ವೇ** :– ನ ಶಾವಂ ಸೂತಕಾತ್ಕ್ವಚಿತ್ ॥ಇತಿ॥

ಸೂತಕೇ ವರ್ತಮಾನೇ ಶಾವಾಶೌಚಂ ಪಶ್ಚಾದಾಗತಂ ಚೇತ್ ತದಾ ಸೂತಕೇನ ಶಾವಾಶೌಚಂ ನ ಗಚ್ಛೇತ್ । ಶಾವಾಶೌಚಂ ಪೃಥಗನುಷ್ಠೇಯಮಿತ್ಯರ್ಥಃ । ಅತ್ರ 'ಕ್ವಚಿತ್' ಇತ್ಯುಕ್ತತ್ವಾತ್ ಕ್ವಚಿತ್ ಗಚ್ಛೇದಿತಿ ಗಮ್ಯತೇ ॥ ಸೂತಕಾಂತಜಾತಶಿಶುಮರಣಾಶೌಚಸ್ಯ ಸೂತಕೇನೈವ ಅಪಗಮಸ್ಮರಣಾದಿತಿ ॥

## ೩. ಗುರು ಲಘು ವಿಚಾರ

ಯಾವ ಆಶೌಚವು ಗುರು? ಯಾವುದು ಲಘು ಎಂಬುದನ್ನು ಹೇಗೆ ತಿಳಿಯಬೇಕು ? ಜನನಾಶೌಚಕ್ಕಿಂತಲೂ ಮರಣಾಶೌಚವು ಹೆಚ್ಚು ಗುರುವಾಗುವುದು. ಆದರೆ ಕೇವಲ ಜನನ ಮರಣಗಳಿಂದ ಮಾತ್ರ ಗುರು ಲಘು ಭಾವವನ್ನು ನಿರ್ಧರಿಸುವಂತಿಲ್ಲ. ಜನನ ಮರಣಗಳಿಂದಲೂ, ಸಂಬಂಧಾಸತ್ತಿಯಿಂದಲೂ (ತಂದೆ–ತಾಯಿ–ಮಗ–ಹೆಂಡತಿ–ಅಣ್ಣ–ತಮ್ಮ) ಮೊದಲಾದ ಸಂಬಂಧದಿಂದಲೂ ದೀರ್ಘಕಾಲ ಹ್ರಸ್ವಕಾಲ ಕಾಲಕೃತವಾಗಿಯೂ ಮತ್ತು ಪ್ರತ್ಯಕ್ಷ ಪರೋಕ್ಷಗಳಿಂದಲೂ ಇತರ ಅವಯವಸಾಮೀಪ್ಯ ಮಾನಸಿಕ ವ್ಯಾಮೋಹ ಹಾಗೂ ವ್ಯವಹಾರಸಂಪರ್ಕ ಸಾಮೀಪ್ಯ ಈ ಎಲ್ಲಾ ಅಂಶಗಳನ್ನು ವಿವೇಚಿಸಿ ಯಾವುದು ಗುರು ಯಾವುದು ಲಘು ಆಶೌಚವೆಂಬುದನ್ನು ನಿರ್ಧರಿಸಬೇಕೆಂದು ಹೇಳಿರುವರು.

ಜನನಾಶೌಚಕ್ಕಿಂತಲೂ ಮರಣಾಶೌಚವು ಹೆಚ್ಚು ಗುರುವಾಗುವುದು. ಇದು ನಿಮಿತ್ತ ಗುರು. ದೀರ್ಘಕಾಲದ ಆಶೌಚಕ್ಕಿಂತಲೂ ಹ್ರಸ್ವಕಾಲದ ಆಶೌಚವು ಲಘು. ದೀರ್ಘಾಶೌಚವೇ ಹೆಚ್ಚು ಗುರುವೆಂದು ತಿಳಿಯಬೇಕು. ಇದು ಕಾಲಕೃತ ಗುರು ಎಂದು ಹೇಳುವರು. ಪರೋಕ್ಷ ಆಶೌಚಕ್ಕಿಂತಲೂ ಪ್ರತ್ಯಕ್ಷ ಆಶೌಚವು ಹೆಚ್ಚು ಗುರು. ಇದು ಸ್ಥಾನಿಕ ಗುರುವೆಂದು ಹೇಳುವರು. ಸಕುಲ್ಯಾದಿಗಳ ಆಶೌಚಕ್ಕಿಂತಲೂ ಸಪಿಂಡರ ಆಶೌಚವು ಹೆಚ್ಚು ಗುರು ಎಂದು ತಿಳಿಯಬೇಕು. ಸಪಿಂಡರ ಆಶೌಚಕ್ಕಿಂತಲೂ ಸ್ವಕೀಯರ ಆಶೌಚವು ಹೆಚ್ಚು ಗುರುವೆಂದು

ತಿಳಿಯಬೇಕು. ಸ್ವಕೀಯರಲ್ಲಿಯೂ ಸಹ ತನ್ನ ತಾಯಿ, ತಂದೆ, ತನ್ನ ಹೆಂಡತಿ, ತನ್ನ ಮಗ ಮತ್ತು ಮದುವೆಯಾಗದೇ ಇರುವ ಮಗಳು ಈ ಐದು ಜನರು ಹೆಚ್ಚು ಗುರುವಾಗುವರೆಂದು ಹೇಳಿರುವರು. ಈ ಐದು ಜನರ ಆಶೌಚವು ಸಮಗುರುತ್ವವಾಗಿರುವದರಿಂದ ಒಂದು ಆಶೌಚದಿಂದ ಇನ್ನೊಂದು ಆಶೌಚವು ವಿನಿಗಮನ (ಶುದ್ಧಿಯು) ಆಗುವುದಿಲ್ಲವೆಂದು ತಿಳಿಸಿರುವರು. ಈ ಐದೂ ಜನರ ಆಶೌಚವು ಸ್ವಸ್ವಕಾಲದಲ್ಲಿಯೇ ಶುದ್ಧಿಯಾಗುವವೆಂದು ತಿಳಿಯಬೇಕು. ಇದು ಸಂಬಂಧಾಸತ್ತಿ ಗುರು ಆಶೌಚವೆಂದು ಹೇಳಿರುವರು. ಹೀಗೆ ಗುರು ಲಘು ಆಶೌಚವನ್ನು ಸರಿಯಾಗಿ ವಿವೇಚಿಸಿ ಗುರು ಆಶೌಚದಿಂದ ಲಘು ಆಶೌಚವನ್ನು ತೊಳೆದುಕೊಳ್ಳಬೇಕು (ಪರಿಹರಿಸಿಕೊಳ್ಳಬೇಕು).

ಗುರು ಲಘು ಆಶೌಚ ವಿಮರ್ಶೆಯಲ್ಲಿ ಮಹತ್ವದ ವಿಷಯವೇನೆಂದರೆ, ಆಶೌಚ ಬಳಸುವವನಿಗೆ ಯಾವ ಜನರ ಏಕಶರೀರ ಅವಯವ ಅನ್ವಯವೂ ಮತ್ತು ವ್ಯವಹಾರ ಸಂಪರ್ಕವೂ ಹಾಗೂ ಮಾನಸಿಕ ವ್ಯಾಮೋಹವೂ ಎಷ್ಟು ಸಮೀಪವರ್ತಿಯಾಗುವದೋ ಅಷ್ಟು ಆ ಜನರ ಆಶೌಚವು ಗುರುವಾಗವದೆಂದು ತಿಳಿಯಬೇಕು. ಇವುಗಳು ದೂರಸರಿದಂತೆ ಲಘು ಆಶೌಚಗಳಾಗುವವು. ತಂದೆ ತಾಯಿ ಮಗ ಹೆಂಡತಿ ಮತ್ತು ಅವಿವಾಹಿತ ಮಗಳು ಈ ಐದು ಜನರ ಸಂಪರ್ಕವು ಪ್ರತ್ಯಕ್ಷವಾಗಿದೆ. ವ್ಯವಹಾರ ಸಂಪರ್ಕವು ಕ್ಷಣಕ್ಷಣಕ್ಕೂ ನಡೆಯುತ್ತದೆ. ಮಾನಸಿಕ ವ್ಯಾಮೋಹವು ಎಷ್ಟೆಂಬುದು ನಮಗೇ ಗೊತ್ತಿದೆ. ಅದ್ದರಿಂದಲೇ ಆಶೌಚ ಪ್ರಕರಣಗಳಲ್ಲಿಯೇ ಈ ಐದು ಹೆಚ್ಚು ಗುರುವಾಗಿದೆ.

ಈ ಐದು ಜನರೊಳಗೆ ಯಾರು ಹೆಚ್ಚು ಯಾರು ಕಡಿಮೆ ಎಂದು ಗುರುತಿಸುವುದು ಸಾಧ್ಯವಿಲ್ಲ. ಆದ್ದರಿಂದಲೇ ಈ ಐದೂ ಜನರ ಆಶೌಚವು ಸಮಬಲವೆಂದೂ ಸ್ವಸ್ವ ಕಾಲದಲ್ಲಿಯೇ ಶುದ್ಧಿಯಾಗುವದೆಂದೂ ನಿರೂಪಿಸುವರು.

ಸ್ವಕೀಯರು ಮೇಲೆ ಹೇಳಿದ ಐದು ಜನರಿಗಿಂತಲೂ ಸ್ವಲ್ಪ ದೂರದವರು. ಸ್ವಕೀಯರಿಗಿಂತಲೂ ಸಪಿಂಡರು ಮತ್ತೂ ದೂರದವರು. ಹೀಗೆ ತಲೆಗಳೆದಂತೆ ಏಕಾವಯವ ಸಂಪರ್ಕ, ವ್ಯವಹಾರ ಸಂಪರ್ಕ ಮಾನಸಿಕ ವ್ಯಾಮೋಹಗಳು ಕಡಮೆಯಾಗುವುದನ್ನು ನಾವೇ ತಿಳಿಯುತ್ತೇವೆ. ಕೊನೆಗೆ ಇಪ್ಪತ್ತೊಂದು ತಲೆಗಳೆದ ಮೇಲೆ ಅವರು ಯಾರೋ ನಾವು ಯಾರೋ ಆಗಿಬಿಡುತ್ತೇವೆ. ವಿದ್ಯುತ್ಪ್ರವಾಹದ ತೀವ್ರತೆಯು ದೂರ ಹೋದಂತೆ ಬೆಳಕು ಕಡಿಮೆಯಾಗುವ ಹಾಗೇ ರಕ್ತ ಪ್ರವಾಹವು ದೂರ ಸರಿದಂತೆ ಆಶೌಚವು ಕಡಿಮೆ (ಲಘು) ಆಗುವುದನ್ನು ಗಮನದಲ್ಲಿರಿಸಿಕೊಳ್ಳಬೇಕು.

ನಿರ್ಣಯಸಿಂಧುವಿನಲ್ಲಿ ಜನನಾಶೌಚಕ್ಕಿಂತಲೂ ಮರಣವು ಎರಡು ಪಟ್ಟು ಗುರು. ಮರಣಕ್ಕಿಂತಲೂ ರಜಸ್ವಲೆಯು ಎರಡು ಪಟ್ಟು ಗುರು, ರಜಸ್ವಲೆಗಿಂತಲೂ ಬಾಳಂತಿಯು ಎರಡು ಪಟ್ಟು ಗುರು. ಬಾಳಂತಿಗಿಂತಲೂ

ಎರಡು ಪಟ್ಟು ಶವದಹನವು ಗುರುವೆಂದು ಸಣ್ಣಪಟ್ಟಿಯೇ ಇದೆ. ಆದರೆ ಆಶೌಚ ಶತಕದವರು ಈ ಪಟ್ಟಿಯನ್ನು ತಿರಸ್ಕರಿಸಿದ್ದಾರೆ.

---

ದೇವಲಃ– ಅಘಾನಾಂ ಯೌಗಪದ್ಯೇ ತು ಜ್ಞೇಯಾ ಶುದ್ಧಿಃ ಗರೀಯಸಾ ।
ಮರಣೋತ್ಪತ್ತಿಯೋಗೇ ತು ಗರೀಯೋ ಮರಣಂ ಭವೇತ್ ॥

ಷಟ್‌ತ್ರಿಂಶನ್ಮತೇ:– ಶಾವಾಶೌಚೇ ಸಮುತ್ಪನ್ನೇ ಸೂತಕಂ ತು ಯದಾಭವೇತ್ ।
ಶಾವೇನ ಶುದ್ಧ್ಯತೇ ಸೂತಿಃ ನ ಸೂತಿಃ ಶಾವಶೋಧಿನೀ ॥

ಸಂಗ್ರಹೇ:– ಗುರುಣಾ ಲಘು ಶುಧ್ಯೇತ ಲಘುನಾ ನೈವ ತದ್ಗುರು ।
ಶಾವೇನ ಶುಧ್ಯತೇ ಸೂತಿಃ ನ ಸೂತಿಃ ಶಾವಶೋಧಿನೀ ॥
ಇತಿ ।

## ೪. ಸ್ವಕೀಯರೆಂದರೆ ಯಾರು ?

ಅಪ್ಪ, ಅಜ್ಜ, ಅಣ್ಣ, ತಮ್ಮಂದಿರು, ದೊಡ್ಡಪ್ಪ, ಚಿಕ್ಕಪ್ಪ ಇವರಿಬ್ಬರ ಗಂಡು ಮಕ್ಕಳು ತನ್ನ ಮಗ ಮೊಮ್ಮಗ ಇವರೆಲ್ಲರ ಹೆಂಡತಿಯರು– ಇವರೆಲ್ಲರೂ ಸ್ವಕೀಯರು. ಶಾಸ್ತ್ರದಲ್ಲಿ ಹೇಳಿದ ಒಂದು ಕುಟುಂಬದ ಜನರು. ಇವರಿಗೆ ನ್ಯಾಯಾಲಯದಲ್ಲಿ ತಮ್ಮ ದಾಯಭಾಗವನ್ನು ಕೇಳುವ ಅರ್ಹ ಅಧಿಕಾರವಿದೆಯೆಂದು ತಿಳಿಯಬೇಕು. ಈ ಗುಂಪಿನ ಹೊರತಾದವರು, (ಕೇವಲ) ಸಪಿಂಡದವರು ಆಗುವರು.

ಸ್ವಕೀಯರಲ್ಲಿಯೂ ಸಹ ತನ್ನ ಧರ್ಮಪತ್ನಿ, ಮಗ, ಮದುವೆಯಾಗದ ಮಗಳು, ತಾಯಿ ಮತ್ತು ತಂದೆ ಈ ಐದು ಜನರು ಹೆಚ್ಚು ಗುರುವಾಗುವರೆಂದು ಹೇಳಿದೆ. ಈ ಐದು ಜನರ ಆಶೌಚವು ಸಮ ಗುರುತ್ವ ಪಡೆಯುವ ಕಾರಣ ಒಂದರೊಳಗೆ ಇನ್ನೊಂದು ಶುದ್ಧಿಯಾಗುವುದಿಲ್ಲ. ಈ ಐದೂ ಆಶೌಚವೂ ಸ್ವಸ್ವಕಾಲದಲ್ಲಿಯೇ ಶುದ್ಧಿಯನ್ನು ಹೊಂದುತ್ತದೆ ಎಂದು ತಿಳಿಸಿರುವರು.

ಸಪಿಂಡದವರ ಆಶೌಚಕ್ಕಿಂತಲೂ ಸ್ವಕೀಯ ಜನರ ಆಶೌಚವು ಹೆಚ್ಚು ಗುರುವಾಗುವದರಿಂದ ಸ್ವಕೀಯ ಆಶೌಚಾಂತ್ಯದಲ್ಲಿಯೇ ಶುದ್ಧಿಯಾಗುವುದು.

ಸ್ವಕೀಯರಲ್ಲಿಯೂ ಹಿಂದೆ ಹೇಳಿದ ಐದು ಜನರ ಆಶೌಚವು ಹೆಚ್ಚು ಗುರುವಾಗುವದರಿಂದ ಆ ಐದು ಜನರ ಆಶೌಚಾಂತ್ಯದಲ್ಲಿಯೇ ಶುದ್ಧಿಯಾಗುವುದು. ಆ ಐದು ಜನರ ಆಶೌಚವು ಮಾತ್ರ ಸಮಬಲವಾಗುವುದರಿಂದ ತನ್ನ ತನ್ನ ಕಾಲದಲ್ಲಿಯೇ ಶುದ್ಧಿಯಾವುದೆಂದು ತಿಳಿಯಬೇಕು.

ಸ್ವಕೀಯೇತರ ಸಪಿಂಡರ ಮರಣಾಶೌಕ್ಕಿಂತಲೂ ಸ್ವಪುತ್ರ ಜನನಾಶೌಚವೇ ಹೆಚ್ಚು ಗುರುವಾಗುವುದು. ಇಲ್ಲಿಯೂ ಸಹ ವಿಶೇಷ ವಚನಬಲದಿಂದ ಮರಣಾಶೌಚಕ್ಕಿಂತಲೂ ಜನನಾಶೌಚವೇ ಹೆಚ್ಚು ಗುರುವಾಗುವುದರಿಂದ ಸ್ವಪುತ್ರ

ಜನನಾಶೌಚದಿಂದಲೇ ಶುದ್ಧಿಯಾಗುವುದೆಂದು ತಿಳಿಯಬೇಕು. (ಇಲ್ಲಿ ಸಂಬಂಧಾಸಕ್ತಿ ಗುರುತ್ವವಿದೆ)

ಕೆಲವರು ಇಲ್ಲಿ ಪುತ್ರ, ಸೂನು, ಔರಸ ಮೊದಲಾದ ಗಂಡು ಸಂಜ್ಞೆಯ ಪದವಿರುವುದರಿಂದ ಗಂಡು ಮಗು ಹುಟ್ಟಿದರೆ ಮಾತ್ರ ಶುದ್ಧಿಯೆಂದೂ, ಹೆಣ್ಣು ಹುಟ್ಟಿದರೆ ಶುದ್ಧಿಯಾಗುವುದಿಲ್ಲವೆಂದು ಹೇಳುವರು. ಆದರೆ ಅದು ಸರಿಯಲ್ಲ. ಯಾಕೆಂದರೆ ವ್ಯಾಕರಣ ಶಾಸ್ತ್ರದಲ್ಲಿ ಲಿಂಗವು ಶಬ್ದಗತವಾಗಿದೆ. ಅರ್ಥಗತವಲ್ಲ ಎಂಬುದನ್ನು ತಿಳಿದಿರಬೇಕು. ಮತ್ತು ಗಂಡು ಸಂಜ್ಞೆಯ ಪದವು ಉಪಲಕ್ಷಣವಾದ್ದರಿಂದ ಹೆಣ್ಣು ಹುಟ್ಟಿದರೂ ಶುದ್ಧಿಯೆಂದು ಅರಿಯಬೇಕು.

ಸಪಿಂಡದವರ ಮರಣಾಶೌಚಕ್ಕಿಂತಲೂ (ಸ್ವಭಾರ್ಯಾ) ಔರಸ ಪುತ್ರನ ಜನನಾಶೌಚವೇ ಹೆಚ್ಚು ಗುರುವೆಂದು ತಿಳಿಯಬೇಕು. ಆದ್ದರಿಂದ ಔರಸ ಪುತ್ರನ ಜಾತಾಶೌಚದಿಂದಲೇ ಶುದ್ಧಿಯಾಗುವುದು. ಜನನ ಮರಣಗಳಲ್ಲಿ ಮರಣವು ಹೆಚ್ಚು ಗುರುವೆಂಬ ವಚನವು ಸಾಮಾನ್ಯ ವಚನವಾಗಿದೆ. ಇಲ್ಲಿ ಔರಸ ಪುತ್ರನ ಜನನವು ವಿಶೇಷ ವಚನವಾಗಿದೆ. ವಿಶೇಷ ವಚನವು ಸಾಮಾನ್ಯ ವಚನವನ್ನು ಭಾಧಿಸುತ್ತದೆ. ಹೇಗೆಂದರೆ– "ಎಲ್ಲರಿಗೂ ಮಜ್ಜಿಗೆಯನ್ನು ಕೊಡಿ", ಆದರೆ ಕೌಂಡಿನ್ಯನಿಗೆ ಮೊಸರನ್ನು ಕೊಡಿ ಎಂಬ ವಚನದಲ್ಲಿ ಕೌಂಡಿನ್ಯನು ಎಲ್ಲರ ಗುಂಪಿನಲ್ಲಿ ಸೇರಿದ್ದರೂ ಅವನಿಗೆ ಮೊಸರು ಎಂಬ ವಿಶೇಷ ವಚನವು ಸಾಮಾನ್ಯ ವಚನವಾದ ಮಜ್ಜಿಗೆಯನ್ನು ಬಾಧಿಸುತ್ತದೆ. ಹಾಗೆಯೇ ಜನನ ಮರಣಗಳಲ್ಲಿ ಮರಣವು ಗುರು ಎಂಬ ಸಾಮಾನ್ಯ ವಚನದಿಂದ ಗುರುವಾದರೂ ಔರಸಪುತ್ರನ ಜನನವೆಂಬ ವಿಶೇಷ ವಚನವು ಬಾಧಿಸುತ್ತದೆ ಎಂದು ತಿಳಿಯಬೇಕು. ಈ ರೀತಿಯ ನಿಯಮಗಳಿಗೆ ಶಾಸ್ತ್ರಕಾರರು ಉತ್ಸರ್ಗ ಅಪವಾದ ಶಾಸ್ತ್ರಗಳೆಂದು ಸೂಚಿಸಿರುವರು. ಈ ರೀತಿಯ ಶಾಸ್ತ್ರಗಳ ಪರಿಭಾಷೆಯನ್ನು ತಿಳಿದುಕೊಂಡಿರಬೇಕು. ಆದ್ದರಿಂದ ವಿಶೇಷ ವಚನಗಳ ಬಾಧಕವಿಲ್ಲದಿದ್ದರೆ ಜನನ ಮರಣಗಳಲ್ಲಿ ಮರಣಾಶೌಚವು ಹೆಚ್ಚು ಗುರುವೆಂದು ಪರಿಭಾವಿಸಬೇಕು. ಅಥವಾ ಸಪಿಂಡ ಸಕುಲ್ಯಾದಿಗಳ ಆಶೌಚಗಳಲ್ಲಿ ಮರಣವು ಹೆಚ್ಚು ಗುರುವೆಂದು ತಿಳಿಯಬೇಕು. ಈ ಗೊಂದಲವನ್ನು ಸರಿಯಾಗಿ ಅರ್ಥೈಸಿಕೊಳ್ಳಬೇಕಾಗಿ ವಿನಂತಿ ಇದೆ.

---

**ಸ್ಮೃತಿಸಂಗ್ರಹೇ:–** ಪಿತಾ ಪಿತಾಮಹೋ ಭ್ರಾತಾ ಪಿತೃವ್ಯಃ ತತ್ಸುತಃ ಸುತಃ ।
ಪೌತ್ರಶ್ಚ ಭ್ರಾತೃಪುತ್ರಶ್ಚ ತೇಷಾಂ ಪತ್ನ್ಯಯ ಏವ ಚ ॥

ಏತೇ ಸ್ವಕೀಯಾ ವಿಜ್ಞೇಯಾಃ ಪರಕೀಯಾಸ್ತಥೋತ್ತರಾಃ ।
ಸ್ವಕೀಯಾಶೌಚಮಧ್ಯೇ ತು ಪರಕೀಯಂ ಪತೇದ್ಯದಿ ॥

ಸ್ವಕೀಯೇನೈವ ಶುದ್ಧಿಃ ಸ್ಯಾತ್ ಪರಕೀಯೇಣ ನ ಕ್ವಚಿತ್ ।

**ತಾತ್ಪರ್ಯಬೋಧಿನೀ:–** ಅತ್ರಾಪಿ ಆತ್ಮನೋ ಭಾರ್ಯಾ, ಪುತ್ರ ಅನೂಢಕನ್ಯಾ (ಪುತ್ರೀ) ಮಾತಾಪಿತಾ ಚೇತಿ ಗುರುತರಾಃ । ತೇನ ಸ್ವಶಿಶುಸೂತಕಂ ಪಿತ್ರೋಃ ಭಾರ್ಯಾಯಾಶ್ಚ ಪುತ್ರಸ್ಯ ಅನೂಢಕನ್ಯಾಯಾಶ್ಚ ಶಾವಮಪಿ ಸ್ವಸ್ವಕಾಲೇನೈವ ಶುಧ್ಯತಿ । ನ ತದಿತರಜ್ಞಾತೇಃ ಆಶೌಚಶೇಷೇಣ ಇತ್ಯಾದಿ ತತ್ರೈವ ಪ್ರಪಂಚಿತಮಿತಿ ॥

**ಆಖಂಡಾದರ್ಶೇ:–** ಜನನಮರಣಯೋಃ ಅನ್ಯತರಸ್ಮಿನ್ ವರ್ತಮಾನೇ ಯದಿ
ಕಶ್ಚಿಜ್ಜಾಯೇತ ತತಸ್ತು ಮಾತಾಪಿತ್ರೋಃ ದಶಾಹಮೇವಾಶೌಚಮ್ ॥

**ಬೌಧಾಯನಃ:–** ಜನನಮರಣಯೋಃ ಸನ್ನಿಪಾತೇ ಜನನೇ ಮತಾಪಿತ್ರೋಃ
ದಶಾಹಮೇವಾಶೌಚಮ್ ॥

**ಸ್ಮೃತ್ಯಂತರೇ:–** ಮಾತಾಪಿತ್ರೋಃ ಮೃತೌ ಚೈವ ಜನನೇಪ್ಯೌರಸಸ್ತಥಾ ।
ಸ್ವಾಶೌಚಾಪಗಮೇನೈವ ಶುದ್ಧಿಃ ಸ್ಯಾನ್ನಾನ್ಯಕಾಲತಃ ॥

**ಆಶೌಚಸಿದ್ಧಾಂತೇ ಸ್ಮೃತಿಸಂಗ್ರಹವಚನಮ್ :–**

ಪುತ್ರೇ ಜಾತೇ ದಶಾಹಾತ್ಪ್ರಾಕ್ ಪಿತರೌ ಪಿತರೌ ಪಿತುಃ ।
ಪಿತುರ್ಭ್ರಾತೃಸುತೌ ಚೇತ್ತತ್ ಶಾವಶೇಷಾತ್ತದಾ ಶುಚಿಃ ॥

ಏತೇಭ್ಯೋನ್ಯಸ್ಯ ಸಂಸ್ಥಾನಂ ಸಪಿಂಡಶ್ಚ ಯದಾತ್ಮನಃ ।
ಜನ್ಮನ್ಯಂತರ್ದಶಾಹೇ ಸ್ಯಾತ್ ಸೂನೋಃ ತತ್ಸೂತಕಾಚ್ಛುಚಿಃ ॥

**ತಾತ್ಪರ್ಯಬೋಧಿನೀ:–** ಪುತ್ರಜನನದಶಾಹಮಧ್ಯೇ ಮಾತಾಪಿತರೌ ಮಾತಾಮಹಪಿತಾಮಹ್ಯೌ ಪುತ್ರಃ ಪೌತ್ರಃ ಭ್ರಾತಾ ಭ್ರಾತೃಪುತ್ರಃ ಪಿತೃವ್ಯಃ ತತ್ಸುತಾಶ್ಚ – ಏತೇಷಾಂ ಮರಣೇ ಶಾವಾಂತೇ ಶುದ್ಧಿಃ । ನ ಸುತಸೂತಕಾತ್ ಶಾವ ನಿವೃತ್ತಿಃ। ಏತದನ್ಯಸಪಿಂಡಸ್ಯ ಮರಣೇ ತು ತಚ್ಛಾವಂ ಸುತಸೂತಕಾದೇವ ನಿವರ್ತತೇ ।

## ೫. ದೀರ್ಘಾಶೌಚ ಹ್ರಸ್ವಾಶೌಚ ವಿಚಾರ

ಸ್ವಲ್ಪಕಾಲದ ಆಶೌಚಕ್ಕಿಂತಲೂ ದೀರ್ಘಕಾಲದ ಆಶೌಚವು ಹೆಚ್ಚು ಗುರುವಾಗುವುದು. ಇದು ಕಾಲಿಕ ಗುರುವೆಂದು ಋಷಿಗಳು ಹೇಳಿರುವರು. ಹತ್ತು ರಾತ್ರಿಯ ಜನನಾಶೌಚದಲ್ಲಿ ಮೂರು ರಾತ್ರಿಯ ಮರಣಾಶೌಚವು ಸಂಪಾತವಾದರೆ ಜನನಾಶೌಚದಿಂದಲೇ ಶುದ್ಧಿಯಾಗುವುದು ಅಥವಾ ಮೂರು ರಾತ್ರಿಯ ಮರಣದಲ್ಲಿ ಹತ್ತು ರಾತ್ರಿಯ ಜನನಾಶೌಚವು ಸಂಪಾತವಾದರೂ ಜನನಾಶೌಚಾಂತ್ಯದಲ್ಲಿಯೇ ಶುದ್ಧಿಯೆಂದು ತಿಳಿಯಬೇಕು.

---

**ಆಶೌಚಸಿದ್ಧಾಂತೇ:–**

ಸರ್ವತ್ರ ಶಾವಂ ಯದಿ ಸೂತಕಂ ವಾ ಪಶ್ಚಾದುಪೇತಂ ತ್ವಧಿಕಪ್ರಮಾಣಮ್ ।
ನ ತಸ್ಯ ಪೂರ್ವೇಣ ನಿವೃತ್ತಿರುಕ್ತಾ ಸ್ವಕಾಲಮಾನೇನ ಪರಂ ನಿವೃತ್ತಿಃ ॥

**ತಾತ್ಪರ್ಯಬೋಧಿನೀ:-** ನ್ಯೂನಾಶೌಚಮಧ್ಯೇ ಸಮಾಪತಿತಮ್ ಅಧಿಕಪ್ರಮಾಣಂ ಶಾವಂ ಸೂತಕಂ ವಾ ನ ಪೂರ್ವಾಶೌಚೇನ ನಿವರ್ತತೇ । ಕಿಂತು ಸ್ವಕಾಲಾದೇವ ಶುದ್ಧಿಃ ಇತಿ (ಅತ್ರ ಕಾಲಕೃತ ಗುರುತ್ವಂ ವರ್ತತೇ )

**ತತಶ್ಲೋಕೇ:-** ದೀರ್ಘಾದಲ್ಪಂ ವ್ರಜೇನ್ನಾಲ್ಪಾದ್ದೀರ್ಘಮಿತ್ಯಘಸಂಗತಾ ।
ಪ್ರಭಾತೇಽಂತ್ಯದಿನೇ ವಾಪ್ತಮಪ್ಯೇತ್ಯಲ್ಪಂ ಹಿ ದೀರ್ಘತಃ ॥

**ಉಶನಾಃ:-** ಸ್ವಲ್ಪಾಶೌಚಸ್ಯ ಮಧ್ಯೇ ತು ದೀರ್ಘಾಶೌಚಂ ಪತೇದ್ಯದಿ ।
ನ ಪೂರ್ವೇಣ ವಿಶುದ್ಧಿಃ ಸ್ಯಾತ್ ಸ್ವಕಾಲೇನೈವ ಶುದ್ಧ್ಯತಿ ॥

**ಪೈಂಗಲಗೃಹ್ಯೇ:-** ಅತ್ರ ವೃದ್ಧೌ ಪಶ್ಚಿಮೇನ ಪಶ್ಚಿಮೇನ ಸಮಾಪಯೇತ್ ।

**ದೇವಲಃ:-** ಪರತಃ ಪರತಃ ಶುದ್ಧಿಃ ಪರವೃದ್ಧೌ ವಿಧೀಯತೇ ॥

**ಯಮಃ:-** ಅಘವೃದ್ಧಿಮದಾಶೌಚಂ ಪಶ್ಚಿಮೇನ ಸಮಾಪಯೇತ್ ॥

**ನಿರ್ಣಯಸಿಂಧೌ:-** ತ್ರ್ಯಹಾದಿ ಶಾವಮಧ್ಯೇ ದಶಾಹಾದಿ ಸೂತಕೇಽಪಿ ನ ಪೂರ್ವಶೇಷೇಣ ಶುದ್ಧಿಃ ಇತ್ಯಪರಾರ್ಕಃ ॥ ಶುದ್ಧಿವಿವೇಕೇ ತು ಶಾವೇನ ಶುದ್ಧ್ಯತೇ ಸೂತಿಃ ಇತಿ ಪ್ರಾಗುಕ್ತೇಃ ತತ್ರಾಪ್ಯುತ್ತರಾಶೌಚ ನಿವೃತ್ತಿರುಕ್ತಾ ॥ ತನ್ನ ॥ ಉತ್ತರಸ್ಯ ಕಾಲಾಧಿಕ್ಯೇನ ಬಲವತ್ವಾತ್। ಅತ್ರ ಗುರುತ್ವಂ ಲಘುತ್ವಂ ಚ ಕಾಲಕೃತಮೇವ ॥

**ಧರ್ಮಸಿಂಧೌ:-**ಪಕ್ಷಿಣ್ಯಾದಿರೂಪಮೃತಕೇನ ತ್ರಿದಿನಂ ದಶಾಹಂ ಚ ಜನನಾಶೌಚಮ್ । ತ್ರಿದಿನಂ ಮೃತಾಶೌಚೇನ ದಶಾಹಂ ಜಾತಾಶೌಚಂ ಚ ನಾಪೈತೀತಿ ಬಹವಃ । ಕಶ್ಚಿತ್ತು ನ್ಯೂನೇನಾಪಿ ಮೃತಕೇನ ಅಧಿಕಸ್ಯಾಪಿ ಜಾತಾಶೌಚಸ್ಯ ನಿವೃತ್ತಿರಿತಿ ಆಹ । ತ್ರಿದಿನಮೃತಾಶೌಚೇನ ದಶಾಹಂ ಜಾತಾಶೌಚಂ ಮೃತಕಂ ಚ ನ ನಿವರ್ತತೇ ಇತಿ (ಸಿದ್ಧಾಂತಾತ್) ।

## ೬. ತಾಯಿ ತಂದೆಯರ ಮರಣಮಧ್ಯೆ ಸಪಿಂಡಾಶೌಚ ವಿಚಾರ

ತಾಯಿ ತಂದೆಯರ ಆಶೌಚಮಧ್ಯದಲ್ಲಿ ಸಪಿಂಡಜನರ ಮರಣಾಶೌಚವು ಸಂಪಾತವಾದರೆ ತಾಯಿತಂದೆಯರ ಮರಣಾಶೌಚಾಂತ್ಯದಲ್ಲಿಯೇ ಶುದ್ಧಿಯಾಗುವುದು.

---

**ಸ್ಮೃತ್ಯಂತರೇ:-** ಮಾತಾಪಿತ್ರೋರ್ಮೃತೌ ಚೈವ ಜನನೇಪ್ಯೌರಸಸ್ತಥಾ ।
ಸ್ವಾಶೌಚಾಪಗಮೇನೈವ ಶುದ್ಧಿಃ ಸ್ಯಾನ್ನಾನ್ಯಕಾಲತಃ ॥

**ಆಶೌಚಸಿದ್ಧಾಂತೇ:-**
ಏವಂ ಸನಾಭೇರ್ಮರಣಾಘಮಧ್ಯೇ ಮಾತುರ್ಮೃತಿರ್ವಾಪಿ ಪಿತುರ್ಮೃತಿರ್ವಾ । ಮಾತುರ್ಮೃತೌ ಚಾಪಿ ಪಿತುರ್ಮೃತಿರ್ವಾ ತಯೋರ್ನಿವೃತ್ತಿರ್ನ ಕದಾಪಿ ಪೂರ್ವಾತ್ ॥

**ತಾತ್ಪರ್ಯಬೋಧಿನೀ:–** ಜ್ಞಾತ್ಯಘಮಧ್ಯೇ (ಸಪಿಂಡಾನಾಂ ಮರಣಾಶೌಚಮಧ್ಯೇ) ಪಿತ್ರೋಃ ಮರಣೇ, ಮಾತ್ರಘಮಧ್ಯೇ ಪಿತುರ್ಮರಣೇ ಚ ನ ಪೂರ್ವಾಶೌಚಾಚ್ಛುದ್ಧಿಃ ॥

**ಶತಶ್ಲೋಕೀ:–** ಜ್ಞಾತ್ಯಘೇ ಚೇನ್ಮೃತಿಃ ಪಿತ್ರೋಃ ಮಾತ್ರಾಶೌಚೇಽಥವಾ ಪಿತುಃ ।
ದಶಾಹಂ ಪಿತ್ರ್ಯಘೇ ಸ್ಯಾಚ್ಚೇತ್ ಮಾತುಃ ಕುರ್ಯಾತ್ತು ಪಕ್ಷಿಣೀಮ್ ॥

## ೭. ತಾಯಿ ತಂದೆಯ ಮರಣವು ಅನ್ಯೋನ್ಯ ಸಂಪಾತವಾದರೆ

ತಂದೆಯ ಆಶೌಚ ಮಧ್ಯದಲ್ಲಿ ತಾಯಿಯು ಮೃತಪಟ್ಟರೆ ಅಥವಾ ತಾಯಿಯ ಆಶೌಚ ಮಧ್ಯದಲ್ಲಿ ತಂದೆಯು ಮೃತಪಟ್ಟರೆ ಮೃತಪಟ್ಟ ದಿವಸದಿಂದ ಯಥಾವತ್ತಾಗಿ ದಹನ, ಸಂಚಯನ ಹತ್ತುದಿವಸಪರ್ಯಂತ ಉದಕ ಪಿಂಡಾದಿಗಳನ್ನು ನಡಸಲೇಬೇಕು. ಹನ್ನೊಂದನೇ ದಿವಸ ಮೊದಲು ಮೃತಪಟ್ಟವರ ಮಹೇಕೋದ್ದಿಷ್ಟವನ್ನು ಮುಗಿಸಿ ನಿಲ್ಲಿಸಬೇಕು. ನಂತರ ಎರಡನೇ ಮೃತಪಟ್ಟವರ ಹನ್ನೊಂದನೇ ದಿವಸ ಅವರ ಏಕೋದ್ದಿಷ್ಟವನ್ನು ಮುಗಿಸಿಕೊಂಡು ಮುಂದಿನ ಷೋಡಶ ಮತ್ತು ಸಪಿಂಡೀಕರಣ ಶ್ರಾದ್ಧವನ್ನು ಎರಡು ಜನರದ್ದೂ ಸಹತಂತ್ರದಿಂದ ಮಾಡಿ ಮುಗಿಸಬೇಕು. ಇದು ನಮ್ಮ ದಾಕ್ಷಿಣಾತ್ಯರ ವ್ಯವಸ್ಥೆಯಾಗಿದೆ. ಸಮಾನ ತಂತ್ರವೆಂದರೆ ಪ್ರಧಾನಾಂಶವನ್ನು ಬೇರೆಬೇರೆಯಾಗಿಯೂ ಇತರ ಅಂಗಕರ್ಮಗಳನ್ನು ಒಂದಾವರ್ತಿಯಾಗಿಯೂ ನಡೆಸುವ ಪ್ರಯೋಗ ಪರಿಪಾಟಿಯನ್ನು ತಿಳಿದಿರಬೇಕು ಎಂದರ್ಥ.

ತಂದೆಯ ಮರಣ ಮಧ್ಯದಲ್ಲಿ ತಾಯಿಯು ಮೃತಪಟ್ಟರೆ, ತಾಯಿಯ ಬಗ್ಗೆ ಪಕ್ಷಿಣೀ ಆಶೌಚ ಬಳಸಿದರೆ ಸಾಕು ಎಂಬ ವಚನವೂ ದೇಶಾಂತರಕ್ಕೂ ಕಾಲಾಂತರಕ್ಕೂ ಸಂಬಂಧಿಸಿದ್ದು ಆಗಿರುತ್ತದೆ. ನಮ್ಮ ದಾಕ್ಷಿಣಾತ್ಯ ಪದ್ಧತಿಯಲ್ಲಿ ತಾಯಿಯ ಆಶೌಚವನ್ನು ಹತ್ತು ದಿವಸ ಆಚರಿಸಿ ಉದಕ ಪಿಂಡಾದಿಗಳನ್ನು ಸಹ ಹತ್ತು ದಿವಸ ಪರ್ಯಂತ ಪ್ರದಾನ ಮಾಡುವ ಆಚರಿಸುವ ಶಾಸ್ತ್ರ ಪದ್ಧತಿ ಇದೆಯೆಂದು ತಿಳಿಯಬೇಕು.

## ೮. ಐದು ಜನರ ಆಶೌಚವು ಅನ್ಯೋನ್ಯ ಸಂಪಾತವಾದರೆ.

ತಾಯಿ, ತಂದೆ, ಮಗ, ಸ್ವಭಾರ್ಯಾ, ಅವಿವಾಹಿತ ಮಗಳು ಇವರ ಆಶೌಚವು ಅನ್ಯೋನ್ಯ ಸಂಪಾತವಾದರೆ ಪೂರ್ವಾಶೌಚದಿಂದ ಎರಡನೇ ಬಂದ ಆಶೌಚವು ಶುದ್ಧಿಯಾಗುವುದಿಲ್ಲ. ಈ ಐದು ಜನರ ಆಶೌಚವು ಸ್ವಕಾಲದಲ್ಲಿಯೇ ಶುದ್ಧಿಯಾಗುವದೆಂದು ತಿಳಿಸಿರುವರು.

ತಾಯಿತಂದೆಯರ ಆಶೌಚಮಧ್ಯದಲ್ಲಿ ಸ್ವಭಾರ್ಯಾ ಜನನವಾದರೆ ಜನನಾಶೌಚಾಂತ್ಯದಲ್ಲಿಯೇ ಶುದ್ಧಿಯೂ ಆಗುವುದು. ಮರಣವು ಜನನಕ್ಕಿಂತಲೂ

ಹೆಚ್ಚು ಗುರುವಾದರೂ ಸಂಬಂಧಾಸತ್ತಿಯ ಗುರುತ್ವವು ಜನನಾಶೌಚಕ್ಕೆ ಇರುವದರಿಂದ (ವಿಶೇಷ ವಚನಬಲದಿಂದ) ಮರಣದಿಂದ ಶುದ್ಧಿಯಾಗುವದಿಲ್ಲ. ಇಲ್ಲಿಯೂ ಹಿಂದಿನಂತೆ ತಾಯಿತಂದೆಯರ ಔರ್ಧ್ವದೈಹಿಕ ಕರ್ಮವನ್ನು ಏಕೋದ್ದಿಷ್ಟದವರೆಗೆ ನಡೆಸಿ ಜನನದ ಹನ್ನೊಂದನೆಯ ದಿವಸ ಪಂಚಗವ್ಯಪ್ರಾಶನ, ಪುಣ್ಯಾಹವಾಚನಾದಿಗಳನ್ನು ಮುಗಿಸಿ ನಂತರ ತಾಯಿತಂದೆಯರ ಷೋಡಶ ಸಪಿಂಡೀಕರಣಾದಿಗಳನ್ನು ಮುಗಿಸಬೇಕು.

ಈ ಮೇಲೆ ಹೇಳಿದ ಐದೂ ಜನರ ಆಶೌಚವೂ ಅನ್ಯೋನ್ಯ ಸಂಪಾತವಾದರೂ ಇದೇ ಪ್ರಕಾರ ನ್ಯಾಯದಿಂದ ಆಶೌಚ ನಿವೃತ್ತಿ ಮತ್ತು ಧರ್ಮಕರ್ಮಗಳ ಆಚರಣೆಯನ್ನು ನಡೆಸಬೇಕೆಂದು ಹೇಳಿರುವರು.

ಇಲ್ಲೊಂದು ವಿಶೇಷ ವಚನ– ಮೇಲೆ ಹೇಳಿದ ಐದು ಜನರ ಆಶೌಚ ಮಧ್ಯದಲ್ಲಿ ಮೂರು ತಲೆ ಒಳಗಿನ (ತ್ರಿಪುರುಷ) ಸಪಿಂಡದ ಆಶೌಚವೂ ಅಂದರೆ, ಸ್ವಕೀಯಮರಣವು ಸಂಪಾತವಾದರೆ ಅವರ, ಮರಣಾಶೌಚಾಂತ್ಯದಲ್ಲಿಯೇ ಸಪಿಂಡೀಕರಣವನ್ನು ಮಾಡಬೇಕೆಂದು ಶಾತಾತಪರೇ ಮೊದಲಾದವರು ಹೇಳಿದ್ದಾರೆ. ಐದು ಜನರ ಆಶೌಚವು ಹೆಚ್ಚು ಗುರುವಾದ್ದರಿಂದ ಆಶೌಚವು ಹೋಗುತ್ತದೆ ಅಂತಾದರೂ ಸಪಿಂಡೀಕರಣ ನಿರ್ಣಯದಲ್ಲಿ ತ್ರಿಪುರಷ ಸಪಿಂಡರಲ್ಲಿ ಯಾರಿಗೂ ಯಾವ ಆಶೌಚವೂ ಇರಬಾರದು ಎಂದು ತಿಳಿಸಿರುವರು. ಇದನ್ನು ಗಮನದಲ್ಲಿರಿಸಿಕೊಳ್ಳಬೇಕು.

---

**ಪ್ರಯೋಗಮಾಲಾಯಾಮ್ ಅಂಗಿರಾಃ :–**

ಆಶೌಚಸಂಭವಾದಾದ್ಯಂ ನ ಕುರ್ಯಾತ್ ಪ್ರಥಮೇಽಹನಿ ।
ಅಥಾಂತರಾದಶುದ್ಧೋಽಪಿ ಏಕೋದ್ದಿಷ್ಟಾಂತಮಾಚರೇತ್ ॥

**ಅತ್ರಿಃ** :– ಪ್ರಾರಬ್ಧೇ ಪ್ರೇತಪಿಂಡೇ ಸ್ಯಾತ್ ಮಧ್ಯೇ ಚೇಜ್ಜಘನಾದ್ಯಘಮ್ ॥
ತಥಾಪ್ಯಾಶೌಚಪಿಂಡಾಂಸ್ತು ಶಿಷ್ಟಾನ್ ದದ್ಯಾದ್ಯಥಾವಿಧಿ ॥

**ಕಾತ್ಯಾಯನಃ**:– ಏಕೋದ್ದಿಷ್ಟಮಶುದ್ಧೋಽಪಿ ಕುರ್ಯಾದೇಕಾದಶೇಽಹನಿ ।
ಕರ್ತುಸ್ತಾತ್ಕಾಲಿಕೀ ಶುದ್ಧಿಃ ಅಶುದ್ಧಿಃ ಪುನರೇವ ಸಃ ॥

**ಕಶ್ಯಪಃ**:– ಪಿತ್ರಾದಿ ಪಂಚ ತದ್ದಿನಾದ್ದಶಾಹತಃ ಪ್ರಾಕ್ । ಆತ್ಮನಶ್ಚೇತ್ ಬಲವದ್ಭವತ್ಯಘಮ್। ಕೃತ್ವಾದಿಮಂ ಶ್ರಾದ್ಧಮತಃಪರಮ್ । ತತ್ಕರ್ಮಾಚರೇತ್ ಸ್ವಾಪವಿಶುದ್ಧಿತಃ ಪರಮ್ ॥ ಇತಿ ।

**ಶಾತಾತಪಃ**:– ಸಪಿಂಡಾನಾಮಶೇಷಾಣಾಮ್ ಅಶೇಷಾಶೌಚನಿರ್ಗಮೇ ।
ಸಪಿಂಡೀಕರಣಂ ಕುರ್ಯಾತ್, ಇತಿ ಶಾತಾತಪೋಽಬ್ರವೀತ್ ॥

## ೯. ಮಹಾಗುರು ಆಶೌಚ ವಿಚಾರ

ಜನ್ಮಕೊಟ್ಟು ಚೌಲೋಪನಯನಾದಿ ಸಂಸ್ಕಾರಗಳನ್ನು ನೀಡಿ ವೇದ ವೇದಾಂತಾದಿ ಪಾಠಗಳನ್ನು ಕಲಿಸಿ ಜೀವನದ ವೃತ್ತಿಯನ್ನು ಕಲ್ಪಿಸಿಕೊಟ್ಟಿರುವ ತಂದೆಯು ಮಹಾಗುರುವಾಗುವನು ಎಂದು ಹೇಳಿದೆ. ಮೇಲಿನ ಲಕ್ಷಣಗಳಿಂದ ಕೂಡಿದ ಮಹಾಗುರುವಿನ (ತಂದೆಯ) ಆಶೌಚವನ್ನು ಹನ್ನೆರಡು ದಿವಸ ಬಳಸಬೇಕೆಂದು ಹೇಳಿರುವರು.

---

**ಆಶೌಚಸಿದ್ಧಾಂತ:**– ಪ್ರಮೀತೇ ಮಹಾಗುರೌ ದ್ವಾದಶ ವಾಸರಾಣಿ ॥

**ಶತಕೇ:**– ಉತ್ಪಾದ್ಯ ಪುತ್ರಂ ಸಂಸ್ಕೃತ್ಯ ವೇದಮಧ್ಯಾಪ್ಯ ಯಃ ಪಿತಾ ।
ಕುರ್ಯಾದ್ವೃತ್ತಿಂ ಚ ನಷ್ಟೇಽಸ್ಮಿನ್ ದ್ವಾದಶಾಹಂ ಮಹಾಗುರೌ ॥

**ವಿಜ್ಞಾನೇಶ್ವರಃ:**– ಯಸ್ತು ಪಿತಾ ಪುತ್ರಾನುತ್ಪಾದ್ಯ ವೇದಾರ್ಥಂ ಗ್ರಾಹಯಿತ್ವಾ ವೃತ್ತಿಂ ಚ ವಿದಧಾತಿ । ತಸ್ಯ ಮಹಾಗುರುತ್ವಾತ್ ಉಪರಮೇ ದ್ವಾದಶಾಹಮೇವ ಆಶೌಚಮಿತಿ ॥

**ಆಶ್ವಲಾಯನಃ:**– ಮಹಾಗುರುಷು ದಾನಾಧ್ಯಯನೇ ವರ್ಜಯೇರನ್ ॥ ಇತಿ ।

**ಸ್ಮೃತ್ಯಂತರೇ:**– ಸೂತಕಂ ದ್ವಾದಶಾಹಾಂತಂ ನ ಕುರ್ಯಾದ್ದೇವತಾರ್ಚನಮ್ ।
ನ ಕುರ್ಯಾತ್ಪಿತೃಕಾರ್ಯಾಣಿ ದಾನಂ ಹೋಮಂ ತಥಾ ಜಪಮ್ ॥

## ೧೦. ಶವ ದಾಹಕನ ವಿಷಯ

ಮೊದಲು ಅಶುಚಿಯಾಗಿದ್ದು ನಂತರ ಇನ್ನೊಬ್ಬರನ್ನು ದಹನ ಮಾಡಿದರೆ ದಹನದ ಆಶೌಚಾಂತ್ಯದಲ್ಲಿಯೇ ಶುದ್ಧಿಯಾಗುವದೆಂದು ತಿಳಿಯಬೇಕು.

ಸ್ವ ಸಪಿಂಡರ ಆಶೌಚ ಮಧ್ಯದಲ್ಲಿ ಮತ್ತೊಬ್ಬ ಸಪಿಂಡದವನನ್ನು ದಹಿಸಿದರೆ, ದಹನಾಶೌಚದಿಂದಲೇ ಶುದ್ಧಿಯಾಗುವುದು.

ಒಬ್ಬರ ದಹನಾಶೌಚದ ಮಧ್ಯದಲ್ಲಿ ಸಂಸ್ಕರಿಸಲೇಬೇಕಾದ ಅನೇಕ ಜನರನ್ನು ದಹನ ಮಾಡಿದರೆ, ಪೂರ್ವ ದಹನಾಶೌಚದಿಂದಲೇ ಶುದ್ಧಿಯಾಗುವುದು.

ಮೊದಲೊಬ್ಬನನ್ನು ದಹಿಸಿ ನಂತರ ತಾಯಿ ತಂದೆಯರನ್ನು ದಹಿಸಿದರೆ, ತಾಯಿ ತಂದೆಯರ ದಹನಾಶೌಚದಿಂದಲೇ ಶುದ್ಧಿಯಾಗುವುದು.

ಭಿನ್ನ ಗೋತ್ರದವರನ್ನು ಮೊದಲು ದಹಿಸಿ ನಂತರ ಸಪಿಂಡಾದಿ ಜನರನ್ನು ದಹಿಸಿದರೆ ಎರಡನೇ ಸಪಿಂಡಾದಿ ಜನರ ದಹನಾಶೌಚದಿಂದಲೇ ಶುದ್ಧಿಯಾಗುವುದು.

**ಅಥ ಪಂಚಮ ನಿರ್ಣಯಃ**

ತಾಯಿ ತಂದೆಯರನ್ನೇ ಮೊದಲು ದಹಿಸಿ ನಂತರ ಬೇರೆಯವರನ್ನು ದಹಿಸಿದರೂ ತಾಯಿ ತಂದೆಯರ ಆಶೌಚದಿಂದಲೇ ಶುದ್ಧಿಯಾಗುವುದು. ತಾಯಿ, ತಂದೆ, ಹೆಂಡತಿ, ಮಗ, ಅವಿವಾಹಿತ ಮಗಳು ಈ ಜನರೊಳಗಿನ ಯಾರನ್ನಾದರೂ ಮೊದಲು ದಹಿಸಿ ನಂತರ ಈ ಐದು ಜನರೊಳಗಿನ ಯಾರನ್ನಾದರೂ ದಹನಮಾಡಿದರೆ ಎರಡನೇ ದಹನದ ಆಶೌಚಾಂತ್ಯದಲ್ಲಿಯೇ ಶುದ್ಧಿಯಾಗುವುದು. ಆದರೆ, ಪೂರ್ವದಹನದ ಪ್ರೇತಪಿಂಡೋದಕಾಂಜಲಿ ಪ್ರದಾನಾದಿಗಳನ್ನು ಏಕೋದ್ದಿಷ್ಟದವರೆಗೂ ಯಥಾವತ್ ಲೋಪಗೊಳಿಸದೆ ಪ್ರತಿದಿವಸವೂ ಪ್ರೇತಕರ್ಮವನ್ನು ಆಚರಿಸಲೇಬೇಕು.

ಇಲ್ಲೊಂದು ವಿಶೇಷ ಜಿಜ್ಞಾಸೆ- ಮಹೇಕೋದ್ದಿಷ್ಟವನ್ನು ಅವರವರ ಮೃತಪಟ್ಟ ಹನ್ನೊಂದನೇ ದಿವಸವೇ ನಡೆಸಬೇಕು. ತಾಯಿ ತಂದೆಯರ ಆಶೌಚಾಂತ್ಯದಲ್ಲಿ ಎರಡನೇ ಮರಣಪಟ್ಟವರ ಆಶೌಚಪಿಂಡೋದಕಗಳನ್ನು ಮುಗಿಸಿದರೂ ಏಕೋದ್ದಿಷ್ಟವನ್ನು ಅವರ ಮರಣದ ಹನ್ನೊಂದನೇ ದಿವಸ ಮಧ್ಯಾಹ್ನ ವ್ಯಾಪ್ತಿಯಲ್ಲಿ ಮುಗಿಸಬೇಕೆಂದು ಸ್ಮೃತಿವಚನಗಳು ತಿಳಿಸುತ್ತವೆ.

---

**ಆಶೌಚಸಿದ್ಧಾಂತ:-**
ಕಶ್ಚಿದ್ದಹೇತ್ಕಂಚನ ಯದ್ಯಘಸ್ಯ ಮಧ್ಯೇ ದಶಾಹಂ ದಹನಾದಿ ತಸ್ಯ । ದಗ್ಧ್ವಾ ಕಮಪ್ಯಸ್ಯ ದಶಾಹಮಧ್ಯೇ ಪಿತ್ರೋರ್ಯದಿ ಸ್ಯಾದ್ದಹನಪ್ರಸಕ್ತಿಃ । ತದಾದಿ ತದ್ದಾಹದಿನಂ ಗೃಹೀತ್ವಾ ದಶಾಹಮಾಶೌಚಮಿತಿ ವ್ಯವಸ್ಥಾ ॥

**ತಾತ್ಪರ್ಯಬೋಧಿನೀ:-** ಅಘಮಧ್ಯೇ ಯಂ ಕಂಚನ ದಹೇತ್ ತದಾ ದಗ್ಧುಃ ದಾಹಾದಿದಶಾಹಮಾಶೌಚಮ್ । ತದ್ದಹನಾಘಮಧ್ಯೇ ಪುನಃ ಅನ್ಯಾಂಶ್ಚೇತ್ ದಹೇತ್ತದಾ ಪೂರ್ವದಹನಾಘತಃ ಏವ ಶುದ್ಧಿರಿತ್ಯರ್ಥಃ॥ ಅನ್ಯ ದಹನಾಘಮಧ್ಯೇ ಯದಿ ಪಿತರೌ ದಹೇತ್ತದಾ ಪಿತೃದಹನಾಘತ ಏವ ಶುದ್ಧಿಃ ನ ಪೂರ್ವದಹನಾಘತಃ ಇತಿ॥

**ಶತಶ್ಲೋಕೀ:-** ಪಿತ್ರನ್ಯಾನಂತರಾನೇಕಾನ್ ದಗ್ಧ್ವಾ ಪೂರ್ವಾಘತಃ ಶುಚಿಃ ।
ಪಿತರೌ ಚೇದ್ದಹೇತ್ತತ್ರ ದಶಾಹಾಚ್ಛುದ್ಧಿರಿಷ್ಯತೇ ॥

**ಸ್ಮೃತಿಸಾರಸರ್ವಸ್ವ:-** ಪ್ರಥಮಂ ತಾವತ್ ಮಾತಾಪಿತೃವ್ಯತಿರಿಕ್ತಂ ಯಂ ಕಂಚಿತ್ ಜ್ಞಾತಿಂ ದಗ್ಧ್ವಾ ತದಾಶೌಚಮಧ್ಯೇ ಭೂಯೋಽಪಿ ಸ್ವದಾಹ್ಯಾನ್ ದ್ವಿತೀಯಂ ಬಹೂನ್ವಾ ಜ್ಞಾತೀನ್ ದಗ್ಧ್ವಾ ಬಿಭ್ರಯಾದ್ವಾ ದಗ್ಧ್ವಾಗ್ನಿದಃ ಪೂರ್ವಾಶೌಚತ ಏವ ಶುಚಿರ್ಭವತಿ॥ ಅತ್ರ ಪೂರ್ವಾಶೌಚಮಧ್ಯೇ ಸೋಗ್ನಿದಃ ಪುತ್ರಃ ಪಿತರೌ ಚೇದ್ದಹೇತ್ತದಾ (ಪಿತೃದಹನಾಘತಃ) ಪಿತೃದಶಾಹೇನೈವ ಶುಚಿರ್ಭವತಿ ॥ಇತಿ।

**ನಾರದಃ:-** ಅಂತರ್ದಶಾಹೇ ಚೇತ್ಕುರ್ಯಾತ್ ಪುನಃ ಪ್ರೇತಸ್ಯ ಸಂಸ್ಕೃತಿಃ ।
ತಸ್ಮಾಚ್ಛುದ್ಧಿಃ ಪೂರ್ವಶೇಷಾತ್ ಏಕೋದ್ದಿಷ್ಟಂ ಯಥೋದಿತಮ್ ॥

**ಸ್ಮೃತಿಸಾರಸರ್ವಸ್ವ :-** ಅತ್ರ ಆಶೌಚಸ್ಯ ಪಿಂಡೋದಕದಾನಸ್ಯ ಚ ಪೂರ್ವೇಣ ಸಮಾಪನೇಽಪಿ ಏಕೋದ್ದಿಷ್ಟಂ ಯಥೋದಿತಮೇವ ಭವತೀತಿ ನಾರದಸ್ಮರಣಾತ್, ಏಕಾದಶೇಽಹ್ನಿ ಮಧ್ಯಾಹ್ನೇ ಏಕೋದ್ದಿಷ್ಟಂ ವಿಧೀಯತೇ ॥ಆದ್ಯಮೇಕಾದಶೇಽಹನಿ ಇತ್ಯಾದಿ ಸ್ಮೃತೇಃ ॥ ಸ್ವಸ್ವ ಏಕಾದಶೇಽಹನ್ಯೇವ ಭವತೀತಿ ಜ್ಞೇಯಮ್ ।

**ಹಾರೀತಃ:-** ದಾಹಕಾರ್ಯದ್ವಯಂ ಸ್ಯಾಚ್ಚೇತ್ ಕರ್ತುರ್ಯೈಕ್ಯೇ ವಿಶೇಷತಃ ।
ಪೂರ್ವೇಣೈವ ಸಮಾಪ್ಯೇತ ತೋಯಪಿಂಡಂ ದ್ವಿತೀಯಕಮ್ ॥

**ಅಂಗಿರಾಃ:-** ದಾಹಕಸ್ತ್ವಾದ್ದಶಾಹೇತು ಶವದಾಹಂ ಚರೇದ್ಯದಿ ।
ಪೂರ್ವೇಣೈವ ವಿಶುದ್ಧಿಃ ಸ್ಯಾತ್ ಪಿತ್ರೋಸ್ತದ್ದಿವಸಾದ್ಭವೇತ್ ॥

**ಸಂವರ್ತಃ:-** ಪೂರ್ವಕರ್ತಾ ದಶಾಹೇ ತು ಪಿತರೌ ಚೇದ್ದಹೇತ್ಪುನಃ ।
ಪೂರ್ವೇಣ ಶುದ್ಧಿಃ ನೈವ ಸ್ಯಾತ್ ಪಿತ್ರೋಃ ತದ್ದಿವಸಾದ್ಭವೇತ್ ॥

ಶವದಾಹಕಸ್ಯ ವಿಷಯೇಽಪಿ ಗುರುಣಾ ಲಘು ಶುಧ್ಯೇತ ಇತ್ಯಾದಿ ಪೂರ್ವೋಕ್ತವಚನಂ ಸುವಿಚಾರ್ಯ ಶುದ್ಧಿರ್ವಕ್ತವ್ಯಾ ॥ ಇತಿ ।

## ೧೧. ಹತ್ತನೇ ದಿನ ಸಂಪಾತವಾದರೆ

ಹತ್ತನೇ ದಿವಸದ ರಾತ್ರ ಪೂರ್ವಯಾಮದಲ್ಲಿ ನಿವೃತ್ತಿಗೆ ಯೋಗ್ಯವಾದ ಇನ್ನೊಂದು ಆಶೌಚವು ಸಂಪಾತವಾದರೆ ಪೂರ್ವಾಶೌಚದಿಂದ ಶುದ್ಧಿಯೆಂದು ದಾಕ್ಷಿಣಾತ್ಯ ಹಿರಿಯ ವಿದ್ವಾಂಸರು ಹೇಳುವರು. ಹತ್ತನೇ ದಿವಸ ನಿವೃತ್ತಿಗೆ ಯೋಗ್ಯವಾದ ಇನ್ನೊಂದು ಆಶೌಚವೂ ಸಂಪಾತವಾದರೆ ಎರಡು ದಿವಸ ಹೆಚ್ಚಿಗೆ ಆಶೌಚವನ್ನು ಬಳಸಬೇಕು.

ಹತ್ತನೇ ದಿವಸ ರಾತ್ರಿ ಅಂತ್ಯಯಾಮದಲ್ಲಿ ಅಥವಾ ಅರುಣೋದಯ ಕಾಲಕ್ಕೆ ನಿವೃತ್ತಿಗೆ ಯೋಗ್ಯವಾದ ಇನ್ನೊಂದು ಆಶೌಚವು ಸಂಪಾತವಾದರೆ ಮೂರು ದಿವಸ ಹೆಚ್ಚಿಗೆ ಆಶೌಚವನ್ನು ಬಳಸಬೇಕು. ದೊಡ್ಡ ಆಶೌಚದಲ್ಲಿ ಸಣ್ಣ ಆಶೌಚವು ಮೊದಲಿನ ಆಶೌಚದ ಹನ್ನೊಂದನೇ ದಿವಸ ಸೂರ್ಯೋದಯದ ಒಳಗೆ ಸಂಪಾತವಾದರೂ (ತಿಳಿದರೂ) ಮೇಲೆ ಹೇಳಿದ ನಿಯಮದಂತೆ ಮೂರು ದಿನ ಬಳಸಿದರೆ ಸಾಕು. ಪೂರ್ವಾಶೌಚದಿಂದ ಶುದ್ಧಿಯಾಗುವುದು. ಹನ್ನೊಂದನೇ ದಿವಸ ಸೂರ್ಯೋದಯದ ನಂತರ ಸಂಪಾತವಾದರೆ, ಆಶೌಚವು ತಿಳಿದರೆ ಆ ಎರಡನೇ ಆಶೌಚವನ್ನು (ಪೃಥಕ್) ಬೇರೆಯಾಗಿಯೇ ಆ ಆಶೌಚದ ಅವಶಿಷ್ಟ ದಿನ ಪರ್ಯಂತ ಬಳಸಬೇಕು.

---

**ಗೌತಮಃ:-** ತಚ್ಛೇದಂತಃ ಪುನರಾಪತೇತ್ ತಚ್ಛೇಷೇಣ ಶುಧ್ಯೇರನ್ । ರಾತ್ರಿಶೇಷೇ ದ್ವಾಭ್ಯಾಂ, ಪ್ರಭಾತೇ (ಸೂರ್ಯೋದಯ ಪೂರ್ವೇ) ತಿಸೃಭಿಃ ॥ ಅಯಂ ಚ ದ್ವ್ಯಹಂ ತ್ರ್ಯಹಂ ಚ ವಿಧಿಃ ಪೂರ್ಣಾಶೌಚವಿಷಯಃ ॥ ಇತಿ

ಅಥ ಪಂಚಮ ನಿರ್ಣಯಃ

**ಅಶೌಚಕಾಂಡೇ:-** ಶಾವಾಂತ್ಯವಾರೇ ಯದಿ ಸೂತಕಂ ವಾ ಶಾಂವಂ ಪುನಶ್ಚೇತ್ ದ್ವ್ಯಹಮಂತ್ಯಯಾಮೇ ।
ತಥಾಽರುಣೋಽಪ್ಯುದಯೇ ತ್ರ್ಯಹಂ ತತ್ ನ್ಯೂನಂ ಯದಿ ಪ್ರಾಕ್ತನ ಶೇಷಶುದ್ಧಿಃ ॥

**ಶಾತಾತಪಃ:-** ರಾತ್ರಿಶೇಷೇ ದ್ವ್ಯಹಾಚ್ಛುದ್ಧಿಃ ಯಾಮಶೇಷೇ ತ್ರ್ಯಹಾಚ್ಛುಚಿಃ ॥

**ಶಂಖಶ್ಲೋಕೇ:-** ಪೂರ್ವಾಂತ್ಯದಿನೇ ತಚ್ಚೇತ್ ದ್ವ್ಯಹಂ ಪೂರ್ವಾಘತಃ ಪರಮ್ ।
ತ್ರ್ಯಹಂ ಪೂರ್ವಾಂತ್ಯಯಾಮೇ ಚ ತತ್ಪ್ರಭಾತೇ ತ್ರ್ಯಹಾಚ್ಛುಚಿಃ ॥

**ತಾತ್ಪರ್ಯಬೋಧಿನೀ:** ಶಾವಾಂತ್ಯವಾರೇ ದಶಮದಿನೇ ತತ್ಸಮಂ ನಿವೃತ್ತಿಯೋಗ್ಯಂ ಶಾವಂ ಸೂತಕಂ ವಾ ಸಂಪತೇತ್ ತದಾ ದಶಾಹಾತ್ ಪರಂ ದ್ವ್ಯಹಮಧಿಕಂ ಗ್ರಾಹ್ಯಮ್ । ತದ್ದಿನ ಏವ ಅಂತ್ಯಯಾಮೇ ಅರುಣೋದಯೇ ವಾ ಸಂಪತೇತ್ ತದಾ ತ್ರ್ಯಹಮಧಿಕಮ್ ॥ ತ್ರಿರಾತ್ರ್ಯಾದಿ ನ್ಯೂನಾಶೌಚಸ್ಯ ಆಸೂರ್ಯೋದಯಮಪಿ ಸಂಪಾತೇ ಪೂರ್ವಸ್ಮಾದೇವ ಶುದ್ಧಿಃ ನ ತ್ವಧಿಕಗ್ರಹಣಮ್ ॥ ಇತಿ ।

## ೧೨. ಸ್ಪರ್ಶಾಸ್ಪರ್ಶಾಶೌಚ

ಮೃತಾಶೌಚದಲ್ಲಿ ಯಾರನ್ನೂ ಮುಟ್ಟಬಾರದು. ಮತ್ತು ಬುದ್ಧಿಪೂರ್ವಕ ಯಾರನ್ನೂ ಮುಟ್ಟಿಸಿಕೊಳ್ಳಬಾರದು. ಆಶೌಚಿಗಳ ಸ್ಪರ್ಶವಾದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು ವಿಧಿಸಿದೆ.

ಬುದ್ಧಿಪೂರ್ವಕ ಸ್ಪರ್ಶಮಾಡಿಕೊಂಡರೆ, ಮೂರು ಪ್ರಾಜಾಪತ್ಯ ಕೃಚ್ಛ್ರ ವ್ರತವನ್ನು ಆಚರಿಸಬೇಕು. ಅಥವಾ ಸಾಂತಪನಾದಿ ಕೃಚ್ಛ್ರವ್ರತವನ್ನು ಅಥವಾ ಅರ್ಧ ಸಾಂತಪನವನ್ನು ಆಚರಿಸಬೇಕು.

ಗೊತ್ತಿಲ್ಲದೆ (ಅಜ್ಞಾನದಿಂದ) ಸ್ಪರ್ಶವಾದರೆ, ಒಂದು ಪ್ರಾಜಾಪತ್ಯ ಕೃಚ್ಛ್ರವನ್ನು ಆಚರಿಸಬೇಕು. ಮರಣದಲ್ಲಿ ಅಸ್ಥಿಸಂಚಯನಾನಂತರ ಜಾತಾಶೌಚದಲ್ಲಿ ಮೊದಲು ನಾಲ್ಕು ದಿನ ಅಸ್ಪೃಶ್ಯವೆಂಬ ಮಾತು ಕಲಿಯುಗದಲ್ಲಿ ಸಂಬಂಧಪಡುವುದಿಲ್ಲವೆಂದು ಹೇಳಿರುವರು. ಜನನದಲ್ಲಿ ಯಾವಾಗಲೂ ಸ್ಪರ್ಶದೋಷವಿಲ್ಲ. ಮರಣದಲ್ಲಿ ಸಂಚಯನಾನಂತರ ದೋಷವಿಲ್ಲವೆಂದು ತಿಳಿಯಬೇಕು. ಆದರೂ ಮರಣದಲ್ಲಿ ಸ್ಪರ್ಶಮಾಡಿಕೊಳ್ಳುವ ಪದ್ಧತಿ ಇಲ್ಲ. (ಇದು ಶಿಷ್ಟಾಚಾರವಾಗಿದೆ)

---

**ಭೃಗುಃ:-** ಶಾವಾಶೌಚೇ ಸಮುತ್ಪನ್ನೇ ಸೂತಕೇ ಚ ದ್ವಿಜಾತಿಭಿಃ ।
ಅನ್ಯಾಶೌಚವತಾಂ ಸ್ಪರ್ಶೋ ನ ಕರ್ತವ್ಯೋ ದ್ವಿಜನ್ಮಭಿಃ ॥

**ಸ್ಮೃತ್ಯಂತರೇ:-** ಪರಸ್ಯಾಶೌಚಿನಃ ಸ್ಪರ್ಶೇ ಶಾವಾಶೌಚೇ ಕಥಂ ಭವೇತ್ ।
ಮತ್ಯಾ ಸಾಂತಪನಂ ಕುರ್ಯಾತ್ ಅಮತ್ಯಾ ತು ತದರ್ಧಕಮ್ ॥

**ಬೃಹಸ್ಪತಿಃ:–** ಸೂತಕೇ ಶಾವ ಸಂಸ್ಪರ್ಶೇ ಮತ್ವಾ ಕೃಚ್ಛ್ರತ್ರಯಂ ಚರೇತ್ ।
ಅಮತ್ವಾ ಕೃಚ್ಛ್ರಮೇಕಂ ಸ್ಯಾತ್ ಇತ್ಯುವಾಚ ಬೃಹಸ್ಪತಿಃ ॥
(ಅತ್ರ ಪ್ರಾಜಾಪತ್ಯಮಿತ್ಯರ್ಥಃ)

## ೧೩. ಶವಾನುಗಮನ ಆಶೌಚ

ಶವವನ್ನು ಅನುಸರಿಸಿ ಸ್ಮಶಾನಕ್ಕೆ ಹೋದರೆ ಅಥವಾ ಧರ್ಮಕಾಷ್ಠವನ್ನು ಪ್ರಕ್ಷೇಪಿಸಿದರೆ ಅಥವಾ ದೀರ್ಘರೋದನ ಮಾಡಿದರೆ ಒಂದು ದಿನ ಆಶೌಚವನ್ನು ಸ್ವೀಕರಿಸಬೇಕು. ಸ್ಮಶಾನದಿಂದ ತಿರುಗಿಬಂದು ಸ್ನಾನ ಮಾಡಿ ಗೋಬ್ರಾಹ್ಮಣರನ್ನು ಸಂದರ್ಶಿಸಿ ಹಿರಣ್ಯಾಗ್ನಿಗಳನ್ನು ಸ್ಪರ್ಶಮಾಡಿ ತುಪ್ಪ, ನಿಂಬಪತ್ರ (ಕಹಿ ಬೇವು) ಪ್ರಾಶನೆ ಮಾಡಿ ಮಾರನೇ ದಿನ ಸೂರ್ಯೋದಯಕ್ಕೆ ಸ್ನಾನ ಮಾಡಿದರೆ ಶುದ್ಧರಾಗುವರು.

---

**ಶತಶ್ಲೋಕೀ:–** ಶವಾನುಗಮನೇ ರೋದೇ ಕರ್ಮಣ್ಯೋ ನ ಹಿ ತದ್ದಿನೇ ।
ಪ್ರೇತಕೃತ್ಯೇ ತು ತತ್ಕಾಲಮಶುದ್ಧೋಥಾಪ್ಲುತಃ ಶುಚಿಃ ॥

**ಸ್ಮೃತಿಸಾರ ಸರ್ವಸ್ವೇ:–** ಅನುಗಮನೇ ಕೃತೇ ಬಾಂಧವೈಃ ಸಹ ರೋದೇ ವಾ ಕೃತೇ ತಸ್ಮಿನ್ನೇವ ದಿನೇ ಶ್ರಾದ್ಧ ಜಪ ಹೋಮಾದಿ ಕರ್ಮ ಯೋಗ್ಯೋ ನ ಭವತೀತ್ಯರ್ಥಃ ।

**ಪಾರಸ್ಕರಃ:–** ಮೃತಸ್ಯ ಬಾಂಧವೈಃ ಸಾರ್ಧಂ ಕೃತ್ವಾ ತು ಪರಿದೇವನಮ್ ।
ವರ್ಜಯೇತ್ತದಹೋರಾತ್ರಂ ದಾನಂ ಶ್ರಾದ್ಧಾದಿ ಕರ್ಮ ಚ ।

**ಸ್ಮೃತ್ಯಂತರೇ:–** ಮೃತಮುದ್ದಿಶ್ಯ ಯೋ ಗಚ್ಛೇತ್ ಘೃತಪ್ರಾಶನಮಾಚರೇತ್ ।
ವರ್ಜಯೇತ್ತದಹೋರಾತ್ರಂ ಜಪ ಹೋಮಾರ್ಚನಾದಿಕಮ್ ॥

**ವಾರಾಹೇ:–** ದಶಾಹಮಧ್ಯಂ ಗತ್ವಾ ತು ಯೋ ನರೋ ಮಾಮಥಾರ್ಚಯೇತ್ ।
ಸಪ್ತಜನ್ಮಕೃತಂ ಪುಣ್ಯಂ ತತ್ಕ್ಷಣಾದೇವ ನಶ್ಯತಿ ॥
ಅನುಗಮ್ಯ ಮೃತಂ ಪ್ರೇತಂ ಇಚ್ಛಯಾ ಯಸ್ತು ಮಾನವಃ ।
ಆರಾಧಯಿತುಮಿಚ್ಛೇನ್ಮಾಂ ಸ ವ್ರಜತ್ಯಧಮಾಂ ಗತಿಮ್ ॥
ಹರಣಂ ಚ ತಥಾ ಕೃತ್ವಾ ಮೃತಕಸ್ಯ ವಸುಂಧರೇ ।
ಭುಕ್ತ್ವಾ ಶ್ರಾದ್ಧಂ ಮಹಾಭಾಗೇ ಮನುಜೋ ಮಾಮಥಾರ್ಚಯೇತ್ ॥
ಚಟಕತ್ವಮನುಪ್ರಾಪ್ಯ ತತೋ ಗೋಧಾ ಭವೇತ್ ಧ್ರುವಮ್ ।
(ವಮರ್ಗತಃ)।

**ಅಖಂಡಾದರ್ಶೇ:–** ದಾಹಂ ವಿನಾಲಂಕರಣಂ ವಾಹಂ ಕೃತ್ವಾ ದಿನಸ್ಯ ತು ।
ಶೇಷೇಣ ಶುದ್ಧಿರುಕ್ತೈವ ರಾತ್ರಾವಪ್ಯುಷಸಿ ಪ್ಲವಃ । (ಸ್ನಾನಮಿತ್ಯರ್ಥಃ) ॥

**ಗಾರುಡೇ:-** ಪ್ರಾಶಯೇನ್ನಿಂಬಪತ್ರಾಣಿ ಸ್ಪೃಷ್ಟ್ವೈವಾಗ್ನಿಂ ವಿಶುಧ್ಯತಿ ।

**ಸ್ಮೃತಿಸಂಗ್ರಹೇ:-** ಸ್ನಾನಾಗ್ನಿಸ್ಪರ್ಶನಾಜ್ಯಾಶ ಮನಃ ಸ್ನಾನಸುಸಂಯಮೈಃ ।
ಸಜಾತೀಯಾ ವಿಶುಧ್ಯಂತೇ ಸ್ವಜಾತೀಯಶವಾನುಗಾಃ ॥

**ಭಾರದ್ವಾಜಃ:-** ಅಸಪಿಂಡಶವಸ್ಯ ಸ್ನಾನಾಲಂಕರಣೇ ಕೃತೇ ದಿವಸಮ್ । ವಹನೇ-ದಶಪ್ರಾಣಾಯಾಮಾನ್ ಕೃತ್ವಾ ನಕ್ಷತ್ರದರ್ಶನಾತ್ಪೂರ್ವಂ ಗ್ರಾಮಾದ್ಬಹೀರಾಸೀತ । ಅನ್ಯಥಾ ತದ್ಗ್ರಾಮೇ ಪ್ರವಿಷ್ಟೇ ಶವಹರ್ತುಃ ಏಕಾಹಮ್। ತದ್ಗೃಹಂ ಪ್ರವಿಷ್ಟೇ ತ್ರ್ಯಹಮ್। ತತ್ರ ಭೋಜನೇ ಕೃತೇ ದಶಾಹಮಾಶೌಚಂ (ಸಂ) ಭವತೀತಿ ಜ್ಞೇಯಮಿತಿ ॥

## ೧೪. ಗ್ರಹಣೇ ಆಶೌಚ ವಿಚಾರ

ಸೂರ್ಯಚಂದ್ರರ ಗ್ರಹಣಕಾಲದಲ್ಲಿ ಸ್ಪರ್ಶದಿಂದ ಮೋಕ್ಷದವರೆಗೆ ಯಾವ ಆಶೌಚವೂ ಇರುವದಿಲ್ಲ. (ತತ್ಕಾಲದಲ್ಲಿ ಶುದ್ಧಿಯಾಗುವದರಿಂದ) ಎಲ್ಲ ವಿಧ ಧರ್ಮಕರ್ಮಗಳಲ್ಲಿ ಭಾಗವಹಿಸಬಹುದು. ಗ್ರಹಣವು ಮೋಕ್ಷವಾದ ನಂತರ ಮತ್ತೆ ಮನಃ ಮೊದಲಿನ ಆಶೌಚದಿಂದ ಅಶುದ್ಧಿಯಾಗುವರು. (ಗ್ರಹಣದಲ್ಲಿ ತಾತ್ಕಾಲಿಕೀ ಶುದ್ಧಿಯೆಂದು ತಿಳಿಯಬೇಕು). ಸ್ತ್ರೀಯರು ಋತುಮತಿಯಾಗಿದ್ದರೆ ಪಾತ್ರಾಂತರದ ನೀರಿನಿಂದ ಸ್ನಾನಮಾಡಿದರೆ ತಾತ್ಕಾಲಿಕೀ ಶುದ್ಧಿಯೆಂದು ಕೆಲವರು ಹೇಳುವರು. ಆದರೆ, (ಇದನ್ನು ಶಿಷ್ಟರು ಒಪ್ಪುವುದಿಲ್ಲ) ಈ ಶುದ್ಧಿಯು ಕೇವಲ ಗ್ರಹಣ ಇರುವಷ್ಟು ವೇಳೆಯೆಂದು ತಿಳಿಯಬೇಕು.

---

**ವ್ಯಾಘ್ರಪಾದಃ:-** ಸ್ಮಾರ್ತಕರ್ಮಪರಿತ್ಯಾಗೋ ರಾಹೋರನ್ಯತ್ರ ಸೂತಕೇ ॥ (ದರ್ಶನೇ)

**ಪ್ರಜಾಪತಿಃ:-** ಆಶೌಚೇ ತು ಸಮುತ್ಪನ್ನೇ ಗ್ರಹಣೇ ಪುತ್ರಜನ್ಮನಿ ।
ಕರ್ತುಸ್ತತ್ಕಾಲಿಕೀ ಶುದ್ಧಿಃ ಪೂರ್ವಾಶೌಚೇನ ಶುಧ್ಯತಿ ॥

**ಸ್ಮೃತಿರತ್ನಾವಲೀ:-** ಗ್ರಹಣೇ ಚೈವ ಗಂಗಾಯಾಂ ಜನನೇ ಸೂತಕಂ ನಹಿ ।
ಭುಕ್ತೇನಾಪಿ ಚ ಕರ್ತವ್ಯಾಃ ಸ್ನಾನದಾನಾದಿಕಾಃ ಕ್ರಿಯಾಃ ॥

**ಅಂಗಿರಾಃ:-** ಸರ್ವೇ ವರ್ಣಾಃ ಸೂತಕೇ ಚ ಮೃತಕೇ ರಾಹುದರ್ಶನೇ ।
ಸ್ನಾತ್ವಾ ಶ್ರಾದ್ಧಂ ಪ್ರಕುರ್ವೀತ ದಾನಂ ಶಾಠ್ಯವಿವರ್ಜಿತಃ ॥

**ವೃದ್ಧವಸಿಷ್ಠಃ:-** ಮೃತೇ ಚ ಸೂತಕೇ ಚೈವ ನ ದೋಷೋ ರಾಹುದರ್ಶನೇ ।
ತಾವದೇವ ಭವೇಚ್ಛುದ್ಧಿಃ ಯಾವನ್ಮುಕ್ತಿರ್ನ ದೃಶ್ಯತೇ ॥

**ಧರ್ಮಶಾಸನೇ:-** ನಾರೀ ಋತುಮತೀ ಸ್ನಾತ್ವಾ ಗ್ರಹಣೇ ರವಿಚಂದ್ರಯೋಃ ।
ಪಾತ್ರಾಂತರಿತ ತೋಯೇನ ಶುಚಿರೇಕೇ ಬ್ರುವನ್ ತದಾ ॥

॥ ಪಂಚಮ ನಿರ್ಣಯವು ಮುಗಿಯಿತು ॥

## ಅಥ ಷಷ್ಠ ನಿರ್ಣಯ:

### ೧. ದತ್ತಕಾದಿ ಆಶೌಚ ವಿಚಾರ

ದತ್ತು ಸ್ವೀಕಾರದ ನಂತರ ಉಪನಯನದೊಳಗೆ ಶಿಶುವು ಮೃತಪಟ್ಟರೆ ಸ್ವೀಕೃತ ತಾಯಿ ತಂದೆಯರು ಸಂಪೂರ್ಣ ಆಶೌಚವನ್ನು ಬಳಸಬೇಕು.

ಸ್ವೀಕೃತ ಸಪಿಂಡದವರು ದಹನ ಮಾಡಿದರೆ ಒಂದು ದಿನ, ಹೂಳಿದರೆ ಸ್ನಾನಮಾತ್ರ ಆಶೌಚವನ್ನು ಬಳಸಬೇಕು.

ಶಿಶುಗ್ರಹಣದ ನಂತರ ಉಪನಯನ ಸಂಸ್ಕಾರದೊಳಗೆ ಮೃತಪಟ್ಟರೆ ಈ ಹಿಂದೆ ಮೃತಾಶೌಚ ಪ್ರಕರಣದ ಬಾಲಮರಣದಲ್ಲಿ ಅಂದರೆ ನಂ. ೫ ರಿಂದ ೮ ರವರೆಗೆ ಹೇಳಿದಂತೆ ಶಿಶು, ಬಾಲಕ, ಕುಮಾರ ಅವಸ್ಥೆಗೆ ಸರಿಯಾಗಿ ವಿಚಾರಿಸಿ ಆಶೌಚವನ್ನು ಬಳಸಬೇಕು.

ದತ್ತ ಕುಮಾರನು ಉಪನಯನದ ನಂತರ ಮೃತಪಟ್ಟರೆ ಸ್ವೀಕೃತ ಪಕ್ಷದ ಎಲ್ಲಾ ಜನರು, ತಮಗೆ ಉಕ್ತವಾದ ರೀತಿ ಸಂಪೂರ್ಣ ಆಶೌಚವನ್ನು ಬಳಸಬೇಕು.

ದತ್ತ ಕುಮಾರನು ಯಾವ ಅವಸ್ಥೆಯಲ್ಲಿ ಮೃತಪಟ್ಟರೂ ಜನ್ಮದ ತಾಯಿ ತಂದೆಯರು ಮೂರು ರಾತ್ರಿ ಆಶೌಚವನ್ನು ಬಳಸಲೇಬೇಕು. ಜನ್ಮ ವಂಶದ ಸಪಿಂಡಜನರು ಸ್ನಾನ ಮಾತ್ರದಿಂದ ಶುದ್ಧಿಯಾಗುವರು.

ಜನ್ಮದ ತಂದೆಯು ದಶಸಂಸ್ಕಾರ, ಉಪನಯನದ ಸಂಸ್ಕಾರವನ್ನೂ ಸಹ ನಡೆಸಿ ನಂತರ ದಾನಕೊಟ್ಟರೆ, ಜ್ಯೇಷ್ಠ ಪುತ್ರರನ್ನು ಉಪನಯನದ ಒಳಗೇ ಕೊಟ್ಟರೂ ಸಹ ಆ ದತ್ತಪುತ್ರರಿಗೆ ಎರಡು ಗೋತ್ರವಾಗುವದು. ಇವನಿಗೆ ದ್ವ್ಯಾಮುಷ್ಯಾಯಣ ದತ್ತಪುತ್ರನೆಂದು ಹೇಳುವರು. ಈ ದ್ವ್ಯಾಮುಷ್ಯಾಯಣ ದತ್ತನು ಎರಡು ಗೋತ್ರದವನು. ಎರಡೂ ಕಡೆಯ ತಾಯಿ ತಂದೆಯರು ಆಶೌಚನ್ನು ಮೂರು ರಾತ್ರಿ ಬಳಸಬೇಕೆಂದು ಹೇಳಿರುವರು. ಮತ್ತು ಎರಡೂ ಕಡೆಯ ಸಪಿಂಡಜನರು ಒಂದು ದಿನ ಆಶೌಚವನ್ನು ಬಳಸಬೇಕೆಂದು ಕೆಲವರು, ಮತ್ತೆ ಕೆಲವರು ಸ್ನಾನ ಮಾತ್ರ ಆಶೌಚವೆಂದು ಹೇಳಿರುವರು.

### ೨. ಕ್ಷೇತ್ರಜಾದಿ ಪುತ್ರರ ಆಶೌಚ ವಿಚಾರ

ಕ್ಷೇತ್ರಜ, ಕ್ರೀತ, ಅನೌರಸ, ಕೃತ್ರಿಮ, ಅಪವಿದ್ಧ, ಗೂಢಪುತ್ರ ಮೊದಲಾದ ಪುತ್ರರ ಆಶೌಚವನ್ನು ಈ ಕಲಿಯುಗದಲ್ಲಿ ಬಳಸುವ ಅವಶ್ಯಕತೆಯಿಲ್ಲವು. ಆಶ್ರಮ

ವಿವಾಹ ಸಂಬಂಧದಿಂದ ಹುಟ್ಟಿದ ಹುಡುಗರ ಆಶೌಚವನ್ನೂ ಬಳಸುವ ಆವಶ್ಯಕತೆಯಿಲ್ಲ.

ಧರ್ಮಸಿಂಧುವಿನಲ್ಲಿ ಔರಸಪುತ್ರರು ಮತ್ತು ವಿಧಿಯಂತೆ ಸ್ವೀಕರಿಸಿದ ದತ್ತಕ ಪುತ್ರರು- ಈ ಎರಡು ಪುತ್ರರು ಮಾತ್ರ ಎಲ್ಲಾ ರೀತಿಯ (ಹವ್ಯ ಕವ್ಯ) ಧರ್ಮಕರ್ಮಗಳಿಗೆ ಅರ್ಹ (ಪುತ್ರರು) ಅಧಿಕಾರಿಗಳೆಂದು ಹೇಳಿದೆ.

ಉಳಿದ ಹತ್ತು ವಿಧದ ಪುತ್ರರು ಅನರ್ಹರಾದ್ದರಿಂದ ಅವರನ್ನು ಪರಿತ್ಯಜಿಸಬೇಕೆಂದು ಖಡಾಖಂಡಿತವಾಗಿ ಹೇಳಿದೆ. ಧರ್ಮ ವಿರುದ್ಧವಾಗಿ ಅಕ್ರಮ ವ್ಯವಹಾರಗಳನ್ನು ನಡೆಸಿದವರ ಆಶೌಚವನ್ನು ಆ ಕಾಲದಲ್ಲಿಯೇ (ಘಟಸ್ಫೋಟ) ವಂಶಶುದ್ಧಿಯನ್ನು ನಡೆಸಿ ಆ ಕಾಲದಲ್ಲಿಯೇ ತ್ರಿರಾತ್ರಿ ಆಶೌಚವನ್ನು ಬಳಸಿ ಶುದ್ಧಿ ಮಾಡಿಕೊಳ್ಳಬೇಕೆಂದು ಹೇಳಿದೆ. ಈ ರೀತಿಯ ಪತಿತರ ಆಶೌಚವನ್ನು (ಅವರ ಮರಣದಲ್ಲಿ) ಪುತ್ತ ಪುನಃ ಬಳಸುವ ಅವಶ್ಯಕತೆಯಿಲ್ಲವು. ಕಲಿಯುಗದಲ್ಲಿ ಐದುಸಾವಿರ ವರ್ಷ ಕಳೆದ ನಂತರ ಎಲ್ಲಾ ಕಡೆಗೂ ವರ್ಣಸಂಕರವಾಗುವವು ಎಂದು ಋಷಿಮುನಿಗಳೂ ಹೇಳಿರುವರು. ಈ ರೀತಿಯ ಕ್ಲಿಷ್ಟ ವಿಷಯಗಳಲ್ಲಿ ಧರ್ಮಶ್ರದ್ಧೆಯುಳ್ಳವರೂ ಸಹ ಮೌನವಹಿಸಬೇಕು. ಆದರೆ ಪುರೋಹಿತರು ಮತ್ತು ವೈದಿಕರು ಅಧರ್ಮಾಚರಣೆಗೆ ಆಸ್ಪದ ಕೊಡಬಾರದಾಗಿ ವಿನಂತಿ.

---

**ಧರ್ಮಸಿಂಧು:**– ಔರಸೋ ದತ್ತಕಶ್ಚೇತೌ ಪುತ್ರೌ ಕಲಿಯುಗೇ ಸ್ಮೃತೌ ।
ಅನ್ಯಾನ್ ದಶವಿಧಾನ್ ಪುತ್ರಾನ್ ಕ್ರೀತಾದ್ಯಾನ್ ವರ್ಜಯೇತ್ಕಲೌ ॥

**ವ್ಯಾಸಃ:**– ಕಲೌ ಪಂಚಸಹಸ್ರೇ ತು ಜಾಯತೇ ವರ್ಣಸಂಕರಃ ॥

## ೩. ವಿವಾಹಿತ ಮಗಳಿಗೂ ತಾಯಿ ತಂದೆಯರಿಗೂ ಅಶೌಚ ವಿಚಾರ

ತಾಯಿ ತಂದೆಯರು ದೇಶಾಂತರದಲ್ಲಿ ಮೃತಪಟ್ಟರೆ ವಿವಾಹವಾದ ಮಗಳು ಪಕ್ಷಿಣೀ ಕಾಲ ಆಶೌಚವನ್ನು ಬಳಸಬೇಕು.

ತಾನಿರುವ ಊರೊಳಗೆ ಮೃತಪಟ್ಟರೆ ಮೂರು ರಾತ್ರಿ ಆಶೌಚವನ್ನು ಬಳಸಬೇಕು.

ತಾಯಿ ತಂದೆಯರ ಮರಣಕಾಲದಲ್ಲಿ, ಆ ಪ್ರೇತ ಕರ್ಮದಲ್ಲಿ ಸೇರಿಕೊಂಡು ಪ್ರೇತಾನ್ನಭೋಜನ ತದ್ಗೃಹವಾಸ ಮೊದಲಾದ ಸಂಪರ್ಕವನ್ನು ನಡೆಸಿದರೆ ಹತ್ತು ರಾತ್ರಿ ಆಶೌಚವನ್ನು ಬಳಸಬೇಕು.

ತಾಯಿ ತಂದೆಯರೂ ಸಹ ವಿವಾಹವಾದ ಮಗಳ ಆಶೌಚವನ್ನು ಇದೇ ವ್ಯವಸ್ಥೆಯಿಂದ ಬಳಸಬೇಕು. ಹೆಣ್ಣು ಮಕ್ಕಳು ಆಶೌಚವನ್ನು ತಪ್ಪಿಸಿಕೊಳ್ಳುವ

ಬಗ್ಗೆ ತಾಯಿ ತಂದೆಯರ ಮರಣದಲ್ಲಿ ತಮ್ಮ ಸೇವೆಯಿಂದ ದೂರವಿರಬಾರದು. ಆಪತ್ಕಾಲದಲ್ಲಿ ಮೂರು ರಾತ್ರಿ ಅಥವಾ ಪಕ್ಷಿಣೀ ಎಂದು ತಿಳಿಯಬೇಕು.

---

**ಶತಶ್ಲೋಕೀ:–** ಪರೋಕ್ಷೇ ಪಕ್ಷಿಣೀ ನೋ ಚೇತ್ ತ್ರ್ಯಹಂ ಪ್ರೇತಾನ್ನಭೋಜನೇ ।
ದಶರಾತ್ರಂ ಮೃತೌ ಮತ್ರ್ಯಾ ಪಿತ್ರೋಶ್ಚಾನ್ಯೋಽನ್ಯಮಿತ್ಯಘಮ್ ॥

**ವಸಿಷ್ಠ:–** ಪಿತ್ರೋರುಪರಮೇ ಚೈವ ಊಢಾನಾಂ ಚ ಕಥಂ ಭವೇತ್ ।
ತ್ರಿರಾತ್ರೇಣೈವ ಶುದ್ಧಿಃ ಸ್ಯಾತ್ ಇತ್ಯಾಹ ಭಗವಾನ್ ಯಮಃ ॥

**ಸ್ಮೃತ್ಯಂತರೇ:–** ಮಾತುಲೇ ಪಕ್ಷಿಣೀ ಕುರ್ಯಾನ್ಮಾತಾಪಿತ್ರೋಸ್ತ್ರಿರಾತ್ರಕಮ್ ।

**ಸ್ಮೃತಿಸಾರಸರ್ವಸ್ವ:–** ಮಮ ಪುತ್ರ್ಯೇವ ಪಚತಿ ನ ತು ಪತ್ನೀ । ತಸ್ಯಾಃ ನಾಸ್ತ್ಯಶೌಚವತ್ । ಅತೋ ಭೋಕ್ತವ್ಯವತ್ । ಇತಿ ಲೋಕಾಪವಾದಮೋಹನಿರಸನಾರ್ಥಂ ಪ್ರೇತಾನ್ನಭೋಜನೇ ದಶರಾತ್ರಮಿತಿ ಪುನರ್ಗ್ರಹಣಮಿತಿ ॥

## ೪. ಬ್ರಹ್ಮಚಾರೀ ವಿಚಾರ

ವ್ರತಸ್ಥ ಬ್ರಹ್ಮಚಾರಿಯು ಅನಿವಾರ್ಯ ಪ್ರಸಂಗದಲ್ಲಿ ತನ್ನ ತಾಯಿತಂದೆಯರ ಮತ್ತು ಆಚಾರ್ಯ ಉಪಾಧ್ಯಾಯ ಗುರು ಇವಿಷ್ಟು ಜನರ ಮರಣ ಸಂಸ್ಕಾರವನ್ನು ಮಾಡಬಹುದು.

ಭೃಗು ಮಹರ್ಷಿಯು ಮಕ್ಕಳಿಲ್ಲದ ಮಾತಾಮಹ ಮಾತುಳ (ಅಜ್ಜನ ಮನೆಯ ಅಜ್ಜ ಮತ್ತು ಮಾವ) ಇವರಿಬ್ಬರ ಪತ್ನಿಯರನ್ನೂ ಸಹ ಸಂಸ್ಕರಿಸಬಹುದೆಂದು ಅನುಜ್ಞೆ ಕೊಟ್ಟಿರುವರು. ಆದರೆ, ವಸಿಷ್ಠಾದಿ ಋಷಿಗಳು ವ್ರತಸ್ಥ ಬ್ರಹ್ಮಚಾರಿಯು ತನ್ನ ತಾಯಿ ತಂದೆಯರನ್ನು ಹೊರತು ಪಡಿಸಿ ಇನ್ನಾರ ಕರ್ಮವನ್ನೂ ನಡೆಸಬಾರದೆಂದು ನಿಷೇಧಿಸಿದ್ದಾರೆ.

ಆದ್ದರಿಂದ ವ್ರತಸ್ಥ ಬ್ರಹ್ಮಚಾರಿಯು ಅಪುತ್ರತ್ವ, ಅನನ್ಯಗತಿಕತ್ವ ಮೊದಲಾದ ಅನಿವಾರ್ಯ ಪ್ರಸಂಗಗಳನ್ನು ವಿಚಾರಿಸಿಯೇ ಕರ್ಮಗಳನ್ನು ಆಚರಿಸಬೇಕು. ಕರ್ಮಾಚರಣೆಯ ಸಂದರ್ಭದಲ್ಲಿಯೂ ಸಹ ವ್ರತಸ್ಥ ಬ್ರಹ್ಮಚಾರಿಯು ಪ್ರೇತಾನ್ನವನ್ನು ಊಟ ಮಾಡಬಾರದು. ಮತ್ತು ಸೂತಕಿಗಳೊಂದಿಗೆ ಸಹವಾಸ ಮಾಡಬಾರದು. ಪ್ರತಿದಿವಸವೂ ಪ್ರೇತಕರ್ಮವನ್ನು ಮುಗಿಸಿ ಸ್ನಾನಮಾಡಿದರೆ ತನ್ನ ವ್ರತಕರ್ಮಗಳಲ್ಲಿ ಶುದ್ಧನಾಗಿಯೂ ಇರುವನೆಂದು ತಿಳಿಯಬೇಕು. ಪ್ರೇತಾನ್ನ ಉಂಡರೆ ಅಥವಾ ಸೂತಕಿಗಳೊಂದಿಗೆ ಸಹವಾಸ ಸಂಪರ್ಕ ಮಾಡಿದರೆ ಹತ್ತು ದಿವಸ ಅಶುಚಿಯಾಗಿ

ವ್ರತವು ಕೆಡುವದು. ಮಾತ್ರವಲ್ಲ ಮುಂದೆ ಕೃಚ್ಛ್ರಾಚರಣೆ ಪುನರುಪನಯನಾದಿ ಪ್ರಾಯಶ್ಚಿತ್ತ ಕರ್ಮಗಳನ್ನು ನಡೆಸಿಕೊಳ್ಳಬೇಕು.

---

**ದೇವಲಃ:-** ಆಚಾರ್ಯಂ ಸ್ವಮುಪಾಧ್ಯಾಯಂ ಮಾತರಂ ಪಿತರಂ ಗುರುಮ್ ।
ನಿಹೃತ್ಯ ತು ವ್ರತೀ ಪ್ರೇತಂ ನ ವ್ರತೇನ ವಿಯುಜ್ಯತೇ ॥

**ಯಾಜ್ಞವಲ್ಕ್ಯಃ:-** ಆಚಾರ್ಯಂ ಪಿತ್ರುಪಾಧ್ಯಾಯಾನ್ ನಿಹೃತ್ಯಾಪಿ ವ್ರತೀ ವ್ರತೀ ।
ನ ಕಟಾನ್ನಂ ಚ ನಾಶ್ನೀಯಾತ್ ನ ಚ ತೈಃ ಸಹ ಸಂವಸೇತ್ ॥
(ಕಟಾನ್ನಂ ಪ್ರೇತಾನ್ನಂ)

**ಬ್ರಾಹ್ಮೇ:-** ಅನ್ಯತ್ರ ಭೋಜನಂ ಕುರ್ಯಾತ್ ನ ಚ ತೈಃ ಸಹ ಸಂವಸೇತ್ ।
ಏಕಾಹಮಶುಚಿರ್ಭೂತ್ವಾ ದ್ವಿತೀಯೇಽಹನಿ ಶುಧ್ಯತಿ ॥

**ಭೃಗುಃ:-** ಮಾತಾಮಹಂ ಮಾತುಲಂ ಚ ತತ್ಪತ್ನ್ಯೌ ಚಾನಪತ್ಯಕೇ ।
ವ್ರತೀ ಸಂಸ್ಕುರುತೇ ಯಸ್ತು ವ್ರತಲೋಪೋ ನ ವಿದ್ಯತೇ ॥

**ಪ್ರಜಾಪ್ರತಿ :-** ಬ್ರಹ್ಮಚಾರೀ ಯದಾ ಕುರ್ಯಾತ್ ಪಿಂಡನಿರ್ವಾಪಣಂ ಪಿತುಃ ।
ತಾವತ್ಕಾಲಂ ತದಾಶೌಚಂ ತತಃ ಸ್ನಾತ್ವಾ ವಿಶುಧ್ಯತಿ ॥

**ಮನುಃ:-** ಗುರೋಃ ಪ್ರೇತಸ್ಯ ಶಿಷ್ಯಸ್ತು ಪಿತೃಮೇಧಂ ಸಮಾಚರೇತ್ ।
ಪ್ರೇತಾಹಾರ್ಯೈಃ ಸಮಂ ತತ್ರ ದಶರಾತ್ರೇಣ ಶುಧ್ಯತಿ ॥

**ವಸಿಷ್ಠ:-** ಬ್ರಹ್ಮಚಾರಿಣಃ ಶವಕರ್ಮಿಣೋ ವ್ರತಾನ್ನಿವೃತ್ತಿರನ್ಯತ್ರ ಮಾತಾಪಿತ್ರೋಃ ।

**ಸ್ಮೃತ್ಯಂತರೇ:-** ದಹನಾದಿ ಸಪಿಂಡಾಂತಂ ಬ್ರಹ್ಮಚಾರೀ ಕರೋತಿ ಚೇತ್ ।
ಅನ್ಯತ್ರ ಮಾತಾಪಿತ್ರೋಃ ಸ್ಯಾತ್ ಉಪನೀಯ ಪುನರ್ವ್ರತೀ ॥
(ಅತ್ರ ಸಂಧರ್ಭವಶಾತ್ ಗರ್ಭಿಣೀಪತಿಧರ್ಮಮಾಹ ಮನುಃ)

**ಮನುಃ:-** ದಹನಂ ವಪನಂ ವಾಪಿ ಪ್ರೇತಸ್ಯಾನ್ಯಸ್ಯ ಗರ್ಭವಾನ್ ।
ನ ಕುರ್ಯಾದುಭಯಂ ತತ್ರ ಕುರ್ಯಾದೇವ ಪಿತುಃ ಸದಾ ॥
(ಗರ್ಭಿಣಿಪತಿರಿತ್ಯರ್ಥಃ) ॥

ಕೋ ಗುರುಃ ಇತ್ಯತ್ರ ಮನುರಾಹ-

**ಮನುಃ:-** ಅಲ್ಪಂ ವಾ ಬಹು ವಾ ಯಸ್ಯ ಶ್ರುತಸ್ಯೋಪಕರೋತಿ ಯಃ ।
ತಮಪೀಹ ಗುರುಂ ವಿದ್ಯಾತ್ ಶ್ರುತೋಪಕ್ರಿಯಯಾ ತಥಾ ॥

**೫. ಆಚಾರ್ಯಾದಿ ಮರಣ ವಿಚಾರ**

ಆಚಾರ್ಯ, ತತ್ಪತ್ನೀ, ತತ್ಪುತ್ರ, ಕರ್ಮಾಂಗದಲ್ಲಿ ಸೇರಿದ ಋತ್ವಿಜರು, ಯಜಮಾನ ಮತ್ತು ಶಿಷ್ಯರು ಈ ಎಲ್ಲಾ ಜನರು ಮೃತರಾದರೆ ಪ್ರತಿಯೋಗಿ

ಜನರು ಮೂರು ರಾತ್ರಿ ಆಶೌಚವನ್ನು ಬಳಸಬೇಕು. ಸಬ್ರಹ್ಮಚಾರಿಯು ಮೃತಪಟ್ಟರೆ ಒಂದು ದಿನ ಆಶೌಚವನ್ನು ಬಳಸಬೇಕು. ಸಹಾಧ್ಯಾಯಿಯು ಮೃತಪಟ್ಟರೆ ಪಕ್ಷಿಣೀ ಕಾಲ ಆಶೌಚವನ್ನು ಬಳಸಬೇಕು. ಉಪಾಧ್ಯಾಯರು, ಮಿತ್ರರು, ರಾಜನು ಮೃತಪಟ್ಟರೆ ಒಂದು ದಿನ ಆಶೌಚವನ್ನು ಬಳಸಬೇಕು. ಮಹಾಮಂತ್ರೋಪದೇಶಕ ಮತ್ತು ವೇದವೇದಾಂತಾದ್ಯುಪದೇಶಕ ಗುರುವು ಮೃತಪಟ್ಟರೆ ಮೂರು ರಾತ್ರಿ ಆಶೌಚವನ್ನು ಬಳಸಬೇಕು.

ಇಲ್ಲಿ ಒಂದು ವಿವೇಚನೆ– ಜನ್ಮ ಕೊಟ್ಟವರು, ಉಪನಯನ ಸಂಸ್ಕಾರ ಮಾಡಿದವರು, ವಿದ್ಯಾಪ್ರದಾನ ಮಾಡಿದವರು, ಅನ್ನ ಕೊಟ್ಟು ಸಲಹಿದವರು, ಪ್ರಾಣಭಯದಿಂದ ರಕ್ಷಿಸಿದವರು– ಈ ಐದು ಜನರ ಆಶೌಚವನ್ನು ಹತ್ತು ರಾತ್ರಿ ಬಳಸಬೇಕೆಂದು ಕೆಲವರು ಹೇಳುವರು. ಆದರೆ, ಮೊದಲನೆಯವರನ್ನು ಬಿಟ್ಟು ಉಳಿದವರ ಆಶೌಚವನ್ನು ಮೂರು ರಾತ್ರಿ ಬಳಸಿದರೂ ಸಾಕೆಂದು ಹಲವರು ಹೇಳುವರು.

ವ್ಯವಹಾರದಲ್ಲಿ ಪುರೋಹಿತರಿಗೆ ಆಚಾರ್ಯರೆಂದು ಹೇಳುವುದು ಉಂಟು. ಆದರೆ, ಆಚಾರ್ಯರು ಬೇರೆ, ಪುರೋಹಿತರು ಬೇರೆ ಎಂದು ತಿಳಿಯಬೇಕು. ಯಾಕೆಂದರೆ, ಆಚಾರ್ಯ ಲಕ್ಷಣವು ಪುರೋಹಿತರಲ್ಲಿ ಸಮಗ್ರವಾಗಿ ಇರುವುದಿಲ್ಲ. ಹಿಂದೆ ಗುರುಕುಲದಲ್ಲಿ ವೇದಾದ್ಯಯನ ಮಾಡುವ ಕಾಲದಲ್ಲಿ ವೇದವನ್ನು ಉಪದೇಶಿಸುವ ಆಚಾರ್ಯನು ಮೃತಪಟ್ಟರೆ ಶಿಷ್ಯರು, ಶಿಷ್ಯನು ಮೃತನಾದರೆ ಆಚಾರ್ಯರು ಪರಸ್ಪರ ಮೂರು ರಾತ್ರಿ ಆಶೌಚವನ್ನು ಬಳಸುತ್ತಿದ್ದರು. ಆದ್ದರಿಂದ ಈ ಕಲಿಯುಗದಲ್ಲಿ ಆಚಾರ್ಯಾದಿ ಜನರು ಮೃತರಾದರೆ ಆಶೌಚವನ್ನು ಬಳಸುವ ಅವಶ್ಯಕತೆ ಇಲ್ಲವೆಂದು ಹಿರಿಯ ವಿದ್ವಾಂಸರ ಅಭಿಪ್ರಾಯವಾಗಿದೆ. ಪುರೋಹಿತರ ಆಶೌಚವನ್ನು ಬಳಸಿದರೆ ಪುರೋಹಿತರು ಶಿಷ್ಯನ ಆಶೌಚವನ್ನು ಬಳಸುವ ಪ್ರಸಂಗ ಬರುವದು. ಈ ರೀತಿಯ ಆಚಾರವು ನಮ್ಮಲ್ಲಿಲ್ಲ.

---

**ಶತಶ್ಲೋಕೀ:–** ಶ್ವಶ್ರೂ ಶ್ವಶುರ ಸ್ವಾಚಾರ್ಯ ತತ್ಪತ್ನಿ ತತ್ಸುತರ್ತ್ವಿಜಾಮ್ ।
ಯಾಜ್ಯಾಂತೇ ವಾಸಿನೋಽನಾಶೇ ತ್ರ್ಯಹಮಿತ್ಯಾಹ ಗೌತಮಃ ।
ಸಬ್ರಹ್ಮಚಾರಿಣ್ಯೇಕಾಹಂ ಸಹಾಧ್ಯಾಯಿನಿ ಪಕ್ಷಿಣೀ ।
ಉಪಾಧ್ಯಾಯ ಸುಹೃತ್, ಶಾಲ, ಭೂಭೃತ್ಸು ಚ ಮೃತೇಷ್ವಹಃ ।

**ಸ್ಮೃತಿಸಾರಸರ್ವಸ್ವಃ:–** ಏಕಾಚಾರ್ಯೋಪನೀತಃ ಸಬ್ರಹ್ಮಚಾರೀ । ಸಹಾಧೀತ ಕೃತ್ಸ್ನವೇದಃ ಸಹಾಧ್ಯಾಯೀ ॥ ವೇದಸ್ಯ ವೇದಾಂಗಾನಾಂ ವಾ ಅಧ್ಯಾಪಯಿತಾ ಉಪಾಧ್ಯಾಯಃ ॥ ಭೂಭೃತ್ ಮಂಡಲಾಧಿಪಃ । ಏತೇಷಾಂ ಮರಣೇ ಅಹೋರಾತ್ರಮ್ ।

**ಆಚಾರ್ಯಲಕ್ಷಣಂ ಶಿಖಾಮಣೌ –**

ಶಿಷ್ಯಂ ಕಾಲೇ ಚೋಪನೀಯಾತ್ ಸಸಮ್ಯಕ್
ಸಾಂಗಂ ವೇದಂ ಕಲ್ಪಮಧ್ಯಾಪಯೇದ್ಯಃ ।
ಆಚಾರಾರ್ಥಂ ಧರ್ಮಶಾಸ್ತ್ರಸ್ಯ ಮೂಲಂ
ವಕ್ತಾ ಯೋಽಸೌ ಕೃತ್ಸ್ನ ಆಚಾರ್ಯ ಉಕ್ತಃ ॥

**ಋತ್ವಿಕ್ ಲಕ್ಷಣಂ ಮನುಃ:–**

ಅಗ್ನ್ಯಾಧೇಯಂ ಪಾಕಯಜ್ಞಾದ್ಯಗ್ನಿಷ್ಟೋಮಾದಿಕಾನ್ ಮಖಾನ್ ।
ಯಃ ಕರೋತಿ ವ್ರತೇ ಯಜ್ಞೇ ತಸ್ಯ ಋತ್ವಿಗಿಹೋಚ್ಯತೇ ॥

**ನಾರದಃ:–** ಋತ್ವಿಕ್ತು ತ್ರಿವಿಧೋ ದೃಷ್ಟಃ ಪೂರ್ವೈರ್ಜುಷ್ಟಃ ಸ್ವಯಂ ವೃತಃ ।
ಯದೃಚ್ಛಯಾ ತು ಯಃ ಕುರ್ಯಾತ್, ಆರ್ತ್ವಿಜ್ಯಂ ಪ್ರೀತಿಪೂರ್ವಕಮ್ ॥

**ಗುರುಲಕ್ಷಣಂ ಮನುಃ:–**

ಅಲ್ಪಂ ವಾ ಬಹು ವಾ ಯಸ್ಯ ಶ್ರುತಸ್ಯೋಪಕರೋತಿ ಯಃ ।
ತಮಪೀಹ ಗುರುಂ ವಿದ್ಯಾತ್, ಶ್ರುತೋಪಕ್ರಿಯಯಾ ತಥಾ ॥

**ಸ್ಮೃತೌ:–** ಜನಿತಾ ಚೋಪನೀತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ ।
ಅನ್ನದಾತಾ ಭಯಾತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥

**ಧರ್ಮಸಿಂಧುಃ:–** ಮಹಾಮಂತ್ರೋಪದೇಶಕಗುರುಮರಣೇ ತ್ರಿರಾತ್ರಮ್ ॥ ಇತಿ ॥

## ೬. ದೇಶಾಂತರವೆಂದರೇನು ? (ಪರೋಕ್ಷ ಶಬ್ದಾರ್ಥ)

ಹತ್ತು ರಾತ್ರಿಯ ಆಶೌಚಕ್ಕೆ ಇಪ್ಪತ್ತು ಯೋಜನ ದೂರವಾದರೆ ದೇಶಾಂತರವೆನಿಸುವುದು. ಮೂರು ರಾತ್ರಿಯ ಆಶೌಚಕ್ಕೆ ಆರು ಯೋಜನ ದೂರವಾದರೆ ದೇಶಾಂತರವೆನಿಸುವುದು. ಪಕ್ಷಿಣೀ ಆಶೌಚಕ್ಕೆ ನಾಲ್ಕು ಯೋಜನ ದೂರವಾದರೆ ದೇಶಾಂತರವೆಂದೂ ತಿಳಿಯಬೇಕು. ಒಂದು ದಿನ ಆಶೌಚಕ್ಕೆ ಎರಡು ಯೋಜನ ದೂರವಾದರೆ ದೇಶಾಂತರವೆಂದು ತಿಳಿಯಬೇಕು. ಸುಲಭವಾದ ನಮ್ಮ ಬಳಕೆಯ ಭಾಷೆಯಲ್ಲಿ ಹನ್ನೆರಡು ಮೈಲು ದೂರವೆಂದರೆ ಒಂದು ಯೋಜನವೆಂದು ಹಿರಿಯರು ಹೇಳುವುದು ಉಂಟು.

---

**ಆಶೌಚ ಸಿದ್ಧಾಂತ:–**

ಕ್ರಮಾದ್ದಶಾಹತ್ರ್ಯಹಪಕ್ಷಿಣೀತ್ಯಾದ್ಯಘೇಷು ವಾಚ್ಯೋಽತ್ರ ಪರೋಕ್ಷ ಶಬ್ದಃ ।
ಭವೇದ್ಧ್ರುವಂ ವಿಂಶತಿ ಷಟ್, ಚತುರ್ದ್ವಿಃ ಸಂಖ್ಯಾನವದ್ಯೋಜನದೇಶವಾಚಿ ॥

**ತಾತ್ಪರ್ಯಬೋಧಿನೀ:–** ಅತ್ರ ಪರೋಕ್ಷಶಬ್ದಃ ದಶಾಹೇ, ತ್ರ್ಯಹೇ, ಪಕ್ಷಿಣ್ಯಾಂ, ಏಕಾಹೇ ಚ ಆಶೌಚೇ ಕ್ರಮೇಣ ವಿಂಶತಿ ಷಟ್ ಚತುಃ ದ್ವಿ (ಪರಮಿತಿ) ಯೋಜನ ಪರಿಮಿತದೇಶವಾಚೀ ಭವೇತ್ ॥ ಇತಿ ॥

**ಬೃಹಸ್ಪತಿಃ**:-ದೇಶಾಂತರಂ ವದಂತ್ಯೇಕೇ ಷಷ್ಟಿಯೋಜನಮಾಯತಮ್ ।
ತ್ರಿಂಶದ್ಯೋಜನಮನ್ಯೇ ತು ದ್ವಾತ್ರಿಂಶತಮಥಾಪರೇ ॥

**ಸ್ಮೃತ್ಯರ್ಥಸಾರೇ ಯೋಜನಪರಿಮಾಣಮುಕ್ತಮ್** :-
ವಿತಸ್ತಿರ್ದ್ವಿಗುಣಾರತ್ನಿಃ ತತಃ ಕಿಷ್ಕುಃ ತತೋ ಧನುಃ ।
ಧನುಃಸಹಸ್ರೇ ದ್ವೇ ಕ್ರೋಶಃ ಚತುಷ್ಕ್ರೋಶಸ್ತು ಯೋಜನಮ್ ॥ಇತಿ॥

**ಸ್ಮೃತಿಸಂಗ್ರಹೇ**:- ಮಹಾನದ್ಯಂತರಂ ಯತ್ರ ಗಿರಿರ್ವಾ ವ್ಯವಧಾಯಕಃ ।
ವಾಚೋ ಯತ್ರ ವಿಭಿದ್ಯಂತೇ ತದ್ದೇಶಾಂತರಮುಚ್ಯತೇ ॥

## ೭. ಪುರುಷರಿಗೆ ತ್ರಿರಾತ್ರಾಶೌಚ ಪಟ್ಟಿಕಾ ವಿಚಾರ

ಅಜ್ಜನ ಮನೆಯ ಅಜ್ಜ, ಅಜ್ಜಿ, ಅತ್ತೆ, ಮಾವ, ತಾಯಿಯ ಅಕ್ಕ ತಂಗಿಯರು (ಹಿರಬ್ಬೆ, ಕಿರಬ್ಬೆ) ಪ್ರತ್ಯಕ್ಷದಲ್ಲಿರುವ ವಿವಾಹಿತ ಮಗಳು, ಮಗಳ ಮಗ (ದೌಹಿತ್ರ) ಆವನ ಅಕ್ಕ ತಂಗಿಯರು (ಅತ್ತೆಯರು) ತನ್ನ ಅಕ್ಕ ತಂಗಿಯರು ಇವರ ಗಂಡು ಮಕ್ಕಳು (ಭಾಗಿನೇಯರು) ಮತ್ತು ಹೆಣ್ಣು ಕೊಟ್ಟ ಅತ್ತೆ, ಮಾವ ಈ ಹನ್ನೆರಡು ಜನರು ಉಪನಯನದ ನಂತರ ಮೃತರಾದರೆ ಪ್ರತಿಯೋಗಿ ಪುರುಷರು ಮೂರು ರಾತ್ರಿ ಆಶೌಚವನ್ನು ಬಳಸಬೇಕು. ಹೆಂಡತಿ ಹುಡುಗರು ಯಾರೂ ಇಲ್ಲದಿದ್ದರೆ ಅತ್ತೆ ಮಾವ (ಶ್ವಶ್ರೂ ಶ್ವಶುರ) ಇವರ ಆಶೌಚವನ್ನು ಒಂದು ದಿನ ಬಳಸಿದರೂ ಸಾಕೆಂದು ವ್ಯಾಸರು ಹೇಳಿರುವರು; ಮತ್ತು ಬಂಧುತ್ರಯಜನರು ಸ್ವಗೃಹದಲ್ಲಿ ಮೃತಪಟ್ಟರೆ ಮೂರು ರಾತ್ರಿ ಆಶೌಚವನ್ನು ಬಳಸಬೇಕೆಂದು ಧರ್ಮಸಿಂಧುವಿನಲ್ಲಿ ಹೇಳಿದೆ. ಸ್ತ್ರೀಯರಿಗೆ ವಿವಾಹ ವಿಧಿಯು ಉಪನಯನ ಸಂಸ್ಕಾರವೇ ಆಗಿದೆ ಎಂಬುದಾಗಿ ಮನುವೇ ಮೊದಲಾದ ಸ್ಮೃತಿಕಾರರು ತಿಳಿಸಿರುವರು.

---

**ಮನುಃ**:- ವೈವಾಹಿಕೋ ವಿಧಿಸ್ತ್ರೀಣಾಂ ಔಪನಾಯನಿಕಃ ಸ್ಮೃತಃ ॥

**ಯಾಜ್ಞವಲ್ಕ್ಯಃ**:- ಪಾಣಿಗ್ರಹಾಖ್ಯಸಂಸ್ಕಾರಃ ಔಪನಾಯನಕಃ ಸ್ಮೃತಃ ॥

**ವ್ಯಾಸಃ**:- ಆಶೌಚಂ ತು ತ್ರಿರಾತ್ರಂ ಸ್ಯಾತ್ ಶ್ವಶ್ರೂಶ್ವಶುರಯೋರ್ಮೃತೌ ।
ಜೀವಂತ್ಯಾಮೇವ ಭಾರ್ಯಾಯಾಂ ಮೃತಾಯಾಂ ದಿವಸಾಚ್ಛುಚಿಃ ॥

## ೮. ಸ್ತ್ರೀಯರಿಗೆ ತ್ರಿರಾತ್ರಾಶೌಚ ವಿಚಾರ

ತನ್ನ ಅಣ್ಣ, ತಮ್ಮಂದಿರು, ಇವರ ಗಂಡು ಮಕ್ಕಳು, ಮಲತಾಯಿಯೂ, ತನ್ನ ಅಕ್ಕ ತಂಗಿಯರ ಪುತ್ರರೂ, ಮತ್ತು ಪುರುಷರಿಗೆ ಹೇಳಿದ ಎಲ್ಲ ಜನರು ಇವರು ಉಪನಯನದ ನಂತರ ಮೃತಪಟ್ಟರೆ ಸ್ತ್ರೀಯರಿಗೆ ಮೂರು ರಾತ್ರಿ ಆಶೌಚವೆಂದೂ ತಿಳಿಯಬೇಕು. ಒಟ್ಟಾರೆ ಹನ್ನೆರಡೂ ೧೨+೪=೧೬ ಜನರು ಮೃತರಾದರೆ ತ್ರಿರಾತ್ರವೆಂದು ತಿಳಿಯಬೇಕು.

## ೯. ಪುರುಷರಿಗೆ ಪಕ್ಷಿಣ್ಯಾಶೌಚ ವಿಚಾರ

ತಂದೆಯ ಅಕ್ಕತಂಗಿಯರ (ಸೋದರ ಅತ್ತೆಯ) ಹೆಣ್ಣು, ಗಂಡು ಮಕ್ಕಳು (ಅತ್ತಿಗೆ ಮತ್ತು ಭಾವ) ತಾಯಿಯ ಅಕ್ಕ ತಂಗಿಯರ ಹೆಣ್ಣು ಗಂಡು ಮಕ್ಕಳು, ಸೋದರ ಮಾವನ ಹೆಣ್ಣು ಗಂಡು ಮಕ್ಕಳು ಒಟ್ಟಾರೆ ಆರು ಜನರು, ಅಣ್ಣ ತಮ್ಮಂದಿರ ಹೆಣ್ಣು ಮಕ್ಕಳು, ತನ್ನ ಅಕ್ಕ ತಂಗಿಯರ ಹೆಣ್ಣು ಮಕ್ಕಳು, ಮಗನ ಮಗಳು, ತನ್ನ ಮಗಳ ಮಗಳು (ದೌಹಿತ್ರೀ) ತನ್ನ ಪಿತೃವ್ಯನ ಮಗಳು ಒಟ್ಟಾರೆ ಐದು ಜನರು, ೬+೫=೧೧. ಒಟ್ಟಾರೆ ಈ ಹನ್ನೊಂದು ಜನರು ಉಪನಯನದ ನಂತರ ಮೃತಪಟ್ಟರೆ ಪುರುಷರು ಪಕ್ಷಿಣೀ ಕಾಲ ಆಶೌಚವನ್ನು ಬಳಸಬೇಕು. ಇಲ್ಲಿ ಒಂದು ವಿಶೇಷವೇನೆಂದರೆ ಬಂಧುತ್ರಯರಲ್ಲಿ ಕೇವಲ ಆತ್ಮ ಬಾಂಧವರನ್ನು ಮಾತ್ರ ಪರಿಗಣಿಸಿದೆ. ಶತಶ್ಲೋಕಿಯಲ್ಲಿ ಮತ್ತು ಅಘವಿವೇಚನೆಯಲ್ಲಿಯೂ ಇಷ್ಟೇ ಜನರನ್ನು ಗುರುತಿಸಿದೆ. ಇವರು ಸ್ವಗೃಹದಲ್ಲಿ ಮರಣಪಟ್ಟರೆ ಮೂರು ರಾತ್ರಿ ಆಶೌಚವೆಂದು ಹೇಳಿದೆ. ಯಥಾ ದೇಶಾಚಾರದಂತೆ ವ್ಯವಸ್ಥೆ ಮಾಡಿಕೊಳ್ಳಬೇಕು.

---

**ಬಂಧುತ್ರಯ ವಿಷಯೇ ಧರ್ಮಸಿಂಧುಃ:-**

೧. ಆತ್ಮ ಪಿತೃಷ್ವಸುಃ ಪುತ್ರಾಃ ಆತ್ಮಮಾತೃಷ್ವಸುಃ ಸುತಾಃ ।
ಆತ್ಮ ಮಾತುಳಪುತ್ರಾಶ್ಚ ವಿಜ್ಞೇಯಾ ಆತ್ಮಬಾಂಧವಾಃ ॥

೨. ಪಿತುಃ ಪಿತೃಷ್ವಸುಃ ಪುತ್ರಾಃ ಪಿತುಃ ಮಾತೃಷ್ವಸುಃ ಸುತಾಃ ।
ಪಿತುಃ ಮಾತುಳಪುತ್ರಾಶ್ಚ ವಿಜ್ಞೇಯಾಃ ಪಿತೃಬಾಂಧವಾಃ ॥

೩. ಮಾತುಃ ಪಿತೃಷ್ವಸುಃ ಪುತ್ರಾಃ ಮಾತುಃ ಪಿತೃಷ್ವಸುಃ ಸುತಾಃ ।
ಮಾತುಃ ಮಾತುಳಪುತ್ರಾಶ್ಚ ವಿಜ್ಞೇಯಾಃ ಮಾತೃಬಾಂಧವಾಃ ॥

**ತಾತ್ಪರ್ಯ ಬೋಧಿನೀ:-** ಅತ್ರ ಪ್ರಬಂಧಕರ್ತ್ರಾ ಕಾಶ್ಚಿತ್ ಸ್ಮೃತೀಃ (ದೇಶಾಚಾರಾನನುಸೃತ್ಯ) ಪಿತೃಬಂಧವೋ ಮಾತೃಬಂಧವಶ್ಚ ನ ಸಂಗೃಹೀತಾಃ ॥

**ಆಶೌಚ ಸಿದ್ಧಾಂತಃ:-**
ಪಿತೃಷ್ವಸುಃ ಮಾತೃಸಹೋದರಸ್ಯ ಮಾತೃಷ್ವಸುಶ್ಚಾಪಿ ಚ ಪುತ್ರಪುತ್ರ್ಯೌ ।
ಸಹೋದರಸ್ಯಾಪಿ, ತಥಾ ಭಗಿನ್ಯಾಃ ಪುತ್ರಸ್ಯ ಪುತ್ರ್ಯಾಃ ಪಿತೃಸೋದರಸ್ಯ ॥

ಪುತ್ರ್ಯಸ್ತ್ವೇಕಾದಶ ಸಮ್ಮಿತಾನಾಂ ಏಷಾಂ ಜನಾನಾಮ್ ಉಪನೀತಭಾಜಾಮ್ ।
ಮೃತೌ ಪುಮಾಂಸಃ ಪ್ರತಿಯೋಗಿನಶ್ಚೇತ್ ಪಕ್ಷಿಣ್ಯನುಷ್ಠೇಯತಯಾಭ್ಯುಪೇಯಾ ॥ಇತಿ॥

## ೧೦. ಸ್ತ್ರೀಯರಿಗೆ ಪಕ್ಷಿಣ್ಯಾಶೌಚ ವಿಚಾರ

ತಂದೆಯ ಅಣ್ಣ ತಮ್ಮಂದಿರು (ಪಿತ್ರವ್ಯ), ತಾಯಿಯ ಅಕ್ಕ ತಂಗಿಯರು, ತಂದೆಯ ಅಕ್ಕ ತಂಗಿಯರು, ತಾಯಿಯ ಅಣ್ಣ ತಮ್ಮಂದಿರು (ಈ ನಾಲ್ಕು ಜನರು) ಮತ್ತು ಇವರ ಹೆಣ್ಣು ಗಂಡು ಮಕ್ಕಳು (ಈ ಎಂಟು ಜನರು), ಅಜ್ಜನ ಮನೆ ಅಜ್ಜ, ಅಜ್ಜಿ, ಅಣ್ಣ ತಮ್ಮಂದಿರ ಹೆಣ್ಣುಮಕ್ಕಳು, ಅಕ್ಕ ತಂಗಿಯಂದಿರು ಮತ್ತು ಇವರ ಹೆಣ್ಣು ಮಕ್ಕಳು, ತನ್ನ ಮೊಮ್ಮಗಳು, ಹುಟ್ಟಿದ ಮನೆಯ ಅಜ್ಜ ಅಜ್ಜಿ, ಮಗಳ ಮಗಳು, ಈ ಇಪ್ಪತ್ತೊಂದು ಜನರು ಉಪನಯನವಾಗಿ ಮೃತಪಟ್ಟರೆ ಪ್ರತಿಯೋಗಿ ಸ್ತ್ರೀಯರು ಪಕ್ಷಿಣೀ ಕಾಲ ಆಶೌಚವನ್ನು ಬಳಸಬೇಕು.

---

**ಆಶೌಚಸಿದ್ಧಾಂತ:-**

ಪಿತೃವ್ಯಮಾತೃಷ್ವಸೃಮಾತುಲಾಶ್ಚ ಪಿತೃಷ್ವಸ್ರೈಷಾಮಪಿ ಪುತ್ರಪುತ್ರ್ಯಃ ।
ಮಾತಾಮಹೌ ಭ್ರಾತೃಸುತಾ ಸ್ವಸಾ ಚ, ____________ ॥

ಪುತ್ರ್ಯಾಃ ಸುತ್ಯೈಕಾಧಿಕವಿಂಶತೇಸ್ತು ಜನಸ್ಯ ಮೃತ್ಯಾಂ ವಿಹಿತೋಪನೀತೇಃ ।
ಯದಿ ಸ್ತ್ರಿಯಃ ತತ್ಪ್ರತಿಯೋಗಿಭಾಜಃ ಪಕ್ಷಿಣ್ಯನುಷ್ಠೇಯತಯಾಭ್ಯುಪೇಯಾ ॥

## ೧೧. ಪುರುಷರಿಗೆ ಏಕಾಹ ವಿಚಾರ

ಮಲತಾಯಿಯ ಅಣ್ಣ ತಮ್ಮಂದಿರು, ಮಲತಾಯಿಯ ಅಕ್ಕ ತಂಗಿಯರು, ಮಲ ತಾಯಿಯ ಮಗಳು ಮತ್ತು ಈ ಮೂರು ಜನರ ಗಂಡು, ಹೆಣ್ಣು ಹುಡುಗರು, ಮಲತಾಯಿಯ ತಂದೆ, ತಾಯಿ, ತನ್ನ ಹೆಂಡತಿಯ ಅಣ್ಣ ತಮ್ಮಂದಿರು, ಮಲತಾಯಿಯ ದೊಡ್ಡಪ್ಪ, ಚಿಕ್ಕಪ್ಪ ಮತ್ತು ಅಣ್ಣ, ತಮ್ಮಂದಿರ ಹೆಣ್ಣು ಮಕ್ಕಳು, ಮಲತಾಯಿಯ ಅಪ್ಪನ ಅಕ್ಕ, ತಂಗಿಯರು, ಇವರ ಗಂಡು ಹೆಣ್ಣು ಮಕ್ಕಳು ಒಟ್ಟಾರೆ ಹದಿನೇಳು ಜನರು ಉಪನಯನದ ನಂತರ ಮೃತಪಟ್ಟರೆ ಪ್ರತಿಯೋಗಿ ಪುರುಷರು ಒಂದು ದಿನ ಆಶೌಚವನ್ನು ಬಳಸಬೇಕು.

---

**ಆಶೌಚಸಿದ್ಧಾಂತ:-**

ಭ್ರಾತಾ ವಿಮಾತುಃ ಸ್ವಸೃಪುತ್ರಿಕೇ ದ್ವೇ ತೇಷಾಮಪತ್ಯಂ ಪಿತರೌ ವಿಮಾತುಃ ।
ಶ್ಯಾಲಸ್ತಥಾ ಭಿನ್ನಪಿತೃವ್ಯಭಿನ್ನಭ್ರಾತ್ರೋಸ್ತು ಪುತ್ರ್ಯೌ ವಿಪಿತೃಷ್ವಸಾಸ್ಯಾಃ ॥
ಪ್ರಜಾ ಇಮಾ ಸಪ್ತದಶೈವ ತೇಷಾಂ ಮೃತೌ ವಿಶುದ್ಧ್ಯಾಃ ಪುರುಷೋ ದಿನೇನ ॥

## ೧೨. ಸ್ತ್ರೀಯರಿಗೆ ಏಕಾಹ ವಿಚಾರ

ಮಲತಾಯಿಯ ಅಣ್ಣ, ತಮ್ಮಂದಿರು, ಮಲತಾಯಿಯ ಅಕ್ಕ, ತಂಗಿಯರು, ಮಲತಾಯಿಯ ಮಗ ಮತ್ತು ಮಗಳು ಈ ನಾಲ್ಕು ಜನರ ಗಂಡು, ಹೆಣ್ಣು ಮಕ್ಕಳು, ಮಲತಾಯಿಯ ತಂದೆ, ತಾಯಿ, ಮಲತಾಯಿಯ ದೊಡ್ಡಪ್ಪ, ಚಿಕ್ಕಪ್ಪ,

ಮಲತಾಯಿಯ ಅಕ್ಕ, ತಂಗಿಯರು ಈ ಇಪ್ಪತ್ತು ಜನರ ಆಶೌಚವನ್ನು ಉಪನಯನದ ನಂತರ ಮೃತಪಟ್ಟರೆ ಸ್ತ್ರೀಯರು ಒಂದು ದಿನ ಬಳಸಬೇಕು.

**ಆಶೌಚ ಸಿದ್ಧಾಂತ:-**
ಭ್ರಾತಾ ವಿಮಾತುಃ ಸ್ವಸೃಪುತ್ರಪುತ್ರ್ಯಃ ತೇಷಾಮಪತ್ಯಂ ಪಿತರೌ ವಿಮಾತುಃ ।
ಭಿನ್ನಃ ಪಿತೃವ್ಯಶ್ಚ ತಥೈವ ಭಿನ್ನಪಿತೃಷ್ವಸಾ ಕಿಂಚ ತಯೋಃ ಪ್ರಜಾಶ್ಚ ॥
ಏಷಾಂ ಮೃತೌ ವಿಂಶತಿಸಂಮ್ಮಿತಾನಾಂ ದಿನೇನ ಶುಧ್ಯೇತ ಪ್ರತಿಯೋಗಿನೀ ಸ್ತ್ರೀ ॥

## ೧೩. ತ್ರಿರಾತ್ರಾದಿ ಆಶೌಚಗಳ ವಿಶೇಷ ವಿಚಾರ

ತ್ರಿರಾತ್ರಾದಿ ಆಶೌಚಪ್ರದರು ದೇಶಾಂತರದಲ್ಲಿ ಮೃತಪಟ್ಟರೆ ತ್ರಿರಾತ್ರದವರು ಪಕ್ಷಿಣೀ ಕಾಲ ಆಶೌಚವನ್ನು ಬಳಸಬೇಕು. ಪಕ್ಷಿಣೀ ಆಶೌಚದವರು ಏಕಾಹ. ಏಕಾಹದವರು ಏಕ ಕಾಲ (ಸಜ್ಯೋತಿ) ಉಳಿದವರು ಸ್ನಾನ ಪರ್ಯಂತ ಆಶೌಚವನ್ನು ಬಳಸಬೇಕು. ಹಿಂದೆ ಹೇಳಿದಂತೆ ಹೆಂಡತಿ, ಹುಡುಗರು ಏನೂ ಇಲ್ಲದ ಅಳಿಯನು ತನ್ನ ಅತ್ತೆ ಮಾವಂದಿರ ಆಶೌಚವನ್ನು ಒಂದು ದಿನ ಬಳಸಿದರೂ ಸಾಕು. ಈ ಮೇಲಿನ ಎಲ್ಲಾ ಜನರಿಗೆ ಉಪನಯನ (ಸ್ತ್ರೀಯರಿಗೆ ವಿವಾಹ) ವಾಗಿದ್ದರೆ ಮಾತ್ರ ಉಕ್ತ ವ್ಯವಸ್ಥೆಯಂತೆ ಆಶೌಚವನ್ನು ಬಳಸಬೇಕು. ಉಪನಯನದ (ಸ್ತ್ರೀಗೆ ವಿವಾಹ) ಸಂಸ್ಕಾರ ನಡೆಯದಿದ್ದರೆ ಸ್ನಾನ ಪರ್ಯಂತ ಆಶೌಚವನ್ನು ಬಳಸಬೇಕು. (ಇದುವೇ ವಿಶೇಷ)

## ೧೪. ಸದ್ಯಃ ಶೌಚ ವಿಚಾರ

ತಂದೆಯ ಅಕ್ಕ,ತಂಗಿಯರ, ತಾಯಿಯ ಅಕ್ಕ, ತಂಗಿಯರ, ತನ್ನ ಮಗಳ ಮತ್ತು ತನ್ನ ಅಕ್ಕ, ತಂಗಿಯರ ಪತಿ (ಗಂಡಂದಿರು) ಅಪ್ಪನ ಅಕ್ಕ ತಂಗಿ, ಮಗನ ಹೆಂಡತಿ, ಸೋದರ ಮಾವನ ಮಗನ ಹೆಂಡತಿ ಒಟ್ಟಾರೆ ಈ ಆರು ಜನರು ಉಪನಯನದ ನಂತರ ಮೃತರಾದರೆ ಸ್ತ್ರೀ ಪುರುಷರಿಬ್ಬರಿಗೂ ಸದ್ಯಃ (ಸ್ನಾನದಿಂದ) ಶುದ್ಧಿಯಾಗುವುದು. ಅಪ್ಪನ ಅಣ್ಣ ತಮ್ಮಂದಿರ ಮತ್ತು ತಾಯಿಯ ಅಣ್ಣ ತಮ್ಮಂದಿರ ಪತ್ನಿಯರು ಇವರ ಮರಣದಲ್ಲಿ ಸ್ತ್ರೀಯರಿಗೆ ಸ್ನಾನದಿಂದ ಶುದ್ಧಿಯು ಆಗುವುದು. ಇದರಂತೆ ಇನ್ನೆಷ್ಟೋ ದೂರದ ಸಂಬಂಧಿಗಳು ಮೃತಪಟ್ಟರೆ ಸ್ನಾನದಿಂದ ಶುದ್ಧಿಯೆಂದು ತಿಳಿಯಬೇಕು.

## ೧೫. ಸಚೇಲ ಸ್ನಾನ

ಚೇಲ ಎಂದರೆ ವಸ್ತ್ರ. ಆಶೌಚದ ವಾರ್ತೆ ಕೇಳುವಾಗ ಶರೀರದ ಮೇಲೆ ಎಷ್ಟು ವಸ್ತ್ರಗಳು ಇರುತ್ತವೆಯೋ ಅಷ್ಟೂ ವಸ್ತ್ರಗಳೊಂದಿಗೆ ನದಿ, ಸರೋವರ, ಹಳ್ಳ, ಹೊಳೆ, ತಟಾಕಗಳಲ್ಲಿ ಸ್ನಾನಮಾಡಿ ಶುದ್ಧಿಯಾಗುವದಕ್ಕೆ ಸಚೇಲ ಸ್ನಾನವೆಂದು ಹೇಳುವರು.

॥ ಪಕ್ಷ ನಿರ್ಣಯವು ಮುಗಿಯಿತು ॥

## ಅಥ ಸಪ್ತಮ ನಿರ್ಣಯಃ (ಸಂಕೀರ್ಣ ವಿಚಾರ)

### ೧. ರಜಸ್ವಲಾಶೌಚ

ಸ್ತ್ರೀಯರು ರಜಸ್ವಲೆಯಾದರೆ ಮೂರು ರಾತ್ರಿ ಅಸ್ಪೃಶ್ಯರೂಪ ಆಶೌಚವನ್ನು ಬಳಸಬೇಕು. ನಾಲ್ಕನೇ ದಿನ ಸಚೇಲ ಸ್ನಾನದಿಂದ ವಚನ ದರ್ಶನಾದಿಗಳಿಗೆ ಮಾತ್ರ ಶುದ್ಧಿಯಾಗುವಳು. ಕೆಲವು ಗ್ರಂಥಗಳಲ್ಲಿ ಪತಿಗೆ ಸ್ಪೃಶ್ಯಳಾಗುವಳು ಎಂದೂ ಹೇಳಿದೆ. ಆದರೆ ಐದನೇ ದಿವಸದಿಂದ ಹವ್ಯ–ಕವ್ಯ ಕರ್ಮಗಳಲ್ಲಿ ಶುದ್ಧಿಯೆಂದು ಹೇಳಿರುವರು. ಕೆಲವು ನಿಬಂಧಗಳಲ್ಲಿ ಏಳನೇ ದಿವಸದ ನಂತರ ಶುದ್ಧಿಯೆಂದು ತಿಳಿಸಿರುವರು. ವಾಸ್ತವಿಕವಾಗಿ ಋತುಸ್ರಾವವು ಎಲ್ಲಿಗೆ ನಿಲ್ಲುವುದೋ, ಅಲ್ಲಿಗೆ ಶುದ್ಧಿಯಾಗುವಳು. ಹವ್ಯ–ಕವ್ಯಾದಿ ಕರ್ಮಗಳಲ್ಲಿ ಸಾಮಾನ್ಯವಾಗಿ ಐದನೇ ದಿವಸದಿಂದ ಶುದ್ಧಿಯಾಗುವಳೆಂದು ತಿಳಿಯಬೇಕು.

ಒಂದು ಸಲ ರಜಸ್ವಲೆಯಾಗಿ ಪುನಃ ಹತ್ತುರಾತ್ರಿಯೊಳಗೆ ಮತ್ತೆ ರಜಸ್ವಲೆಯಾದರೆ ಸಚೇಲ ಸ್ನಾನದಿಂದ ಶುದ್ಧಿಯಾಗುವಳು. ಹನ್ನೊಂದನೇ ದಿನ ಋತುವಾದರೆ ಒಂದು ರಾತ್ರಿ ಹೊರಗುಳಿದು ಮಾರನೇ ದಿವಸ ಸ್ನಾನದಿಂದ ಶುದ್ಧಿಯಾಗುವಳು. ಹನ್ನೆರಡನೇ ದಿವಸ ಋತುವಾದರೆ ಎರಡು ದಿನ ಹೊರಗುಳಿದು ಸ್ನಾನದಿಂದ ಶುದ್ಧಿಯಾಗುವಳು. ಹದಿಮೂರನೆಯ ದಿನವಾದರೆ ಮೂರು ರಾತ್ರಿ ಹೊರಗುಳಿದು ಸ್ನಾನದಿಂದ ಶುದ್ಧಿಯಾಗುವಳು. ಕೆಲವು ನಿಬಂಧಗಳಲ್ಲಿ ಹದಿನೆಂಟು, ಹತ್ತೊಂಭತ್ತು, ಇಪ್ಪತ್ತುದಿವಸಗಳಾದರೆ ಕ್ರಮೇಣ ಒಂದು ರಾತ್ರಿ, ಎರಡು ರಾತ್ರಿ, ಮೂರು ರಾತ್ರಿ ಹೊರಗುಳಿದು ಸ್ನಾನದಿಂದ ಶುದ್ಧಳಾಗುವಳು ಎಂದು ಹೇಳಿದೆ.

ತಿಂಗಳಿಗೆ ಸರಿಯಾಗಿ ಋತುಸ್ನಾನ ಮಾಡುವವರು ಎರಡನೇ ವಾಕ್ಯವನ್ನು, ಹದಿನೆಂಟು, ಇಪ್ಪತ್ತುದಿನಗಳಿಗೆ ಋತುವಾಗುವವರು ಅಥವಾ ಋತುರೋಗಿಗಳು ಮೊದಲನೇ ವಾಕ್ಯವನ್ನು ಅನುಸರಿಸಬೇಕೆಂದು ಹೇಳಿರುವರು. ಆದರೆ, ಸರ್ವತ್ರ ಮೊದಲನೇ ವಾಕ್ಯವನ್ನು ಅನುಸರಿಸುವುದೇ ಯುಕ್ತವೆಂದು ಹಿರಿಯ ವಿದ್ವಾಂಸರ ಅಭಿಪ್ರಾಯವಿರುವುದು.

---

**ಪರಾಶರಃ:–** ಬ್ರಹ್ಮಹತ್ಯಾವಲಿಪ್ತಸ್ಯ ವಾಸವಸ್ಯ ಚ ದುಷ್ಕೃತಮ್ ।
ತದಂಶಭಾಜಾಂ ಸ್ತ್ರೀಣಾಂ ತು ಮಾಸಿ ಮಾಸಿ ರಜಃ ಪತೇತ್ ॥
ಅತೋ ದಿವಾ ವಾ ರಾತ್ರೌ ವಾ ಮಲವದ್ವಾಸಸಃ ಸ್ತ್ರಿಯಃ ।
ತದಹಾದಿ ತ್ರಿರಾತ್ರಂ ಸ್ಯಾತ್ ಆಶೌಚಂ ತಾಸು ವಿದ್ಯತೇ ।

**ಮನುಃ:-** ಭರ್ತುಃ ಶುದ್ಧಾ ಚತುರ್ಥೇಽಹ್ನಿ ಸ್ನಾನೇನ ಸ್ತ್ರೀ ರಜಸ್ವಲಾ ॥

**ಸ್ಮೃತಿಸಂಗ್ರಹೇ:-** ಆದ್ವಾದಶಾಹಾನ್ನಾರೀಣಾಂ ಮೂತ್ರವಚ್ಛೌಚಮಿಷ್ಯತೇ ।
ಅಷ್ಟಾದಶಾಹಾತ್ಸ್ನಾನಂ ಸ್ಯಾತ್ ತ್ರಿರಾತ್ರಂ ಪರತಃ ಶುಚಿಃ ॥
ಮಾಸೇ ಚೋರ್ಧ್ವಂ ರಜೋ ಯಸ್ಯಾಃ ತತ್ಕಾಲಜಮುದಾಹೃತಮ್ ॥

**ಭೃಗುಃ:-** ಅಕಾಲಸಂಭವೇ ಸ್ತ್ರೀಣಾಂ ಶುಚಿತ್ವಂ ತು ವಿನಿರ್ದಿಶೇತ್ ॥

**ಸ್ಮೃತ್ಯಂತರೇ:-** ರಜಸ್ವಲಾ ಚತುರ್ಥೇಽಹ್ನಿ ಸ್ನಾನಾಚ್ಛುದ್ಧಿಮವಾಪ್ನುಯಾತ್ ॥

**ಹಾರೀತಃ:-** ಸ್ನಾನಂ ರಜಸ್ವಲಾಯಾಸ್ತು ಚತುರ್ಥೇಽಹನಿ ಶಸ್ಯತೇ ।
ಗಮ್ಯಾ ನಿವೃತ್ತೇ ರಜಸಿ ನ ಅನಿವೃತ್ತೇ ಕಥಂಚನ ॥

**ಧರ್ಮಸಿಂಧುಃ:-** ಅಷ್ಟಾದಶಾಹೇ ಏಕರಾತ್ರಂ ಏಕೋನವಿಂಶೇ ದ್ವಿರಾತ್ರಂ ವಿಂಶತಿಪ್ರಭೃತಿ ತ್ರಿರಾತ್ರಮ್ ॥ ಅಥವಾ ಏಕಾದಶಾಹೇ (ಮನಃ) ರಜೋದೃಷ್ಟೌ ಏಕಾಹಃ । ದ್ವಾದಶಾಹೇ ದ್ವಿರಾತ್ರಂ ಊರ್ಧ್ವಂ ತ್ರಿರಾತ್ರಮಿತಿ ॥

**ಮರೀಚಿಃ:-** ಶುದ್ಧಾ ಭರ್ತುಶ್ಚತುರ್ಥೇಽಹ್ನಿ ಸ್ನಾನೇನ ಸ್ತ್ರೀ ರಜಸ್ವಲಾ ।
ದೈವೇ ಕರ್ಮಣಿ ಪಿತ್ರೇ ಚ ಪಂಚಮೇಽಹನಿ ಶುಧ್ಯತಿ ॥

**ಗಾರುಡೇ:-** ಸಪ್ತಾಹಾತ್ ಪಿತೃದೇವಾದೌ ಭವೇದ್ಯೋಗ್ಯಾ ವ್ರತಾರ್ಚನೇ ।

## ೨. ಯಜಮಾನನ ಪತ್ನೀ (ಸಂಸ್ಕಾರ್ಯರ) ಮಾತೃ ರಜಸ್ವಲಾ ವಿಚಾರ

ಯಜಮಾನನ ಪತ್ನೀ ಅಥವಾ ಸಂಸ್ಕಾರ್ಯರ ಮಾತೃವು ರಜಸ್ವಲೆಯಾದರೆ ಚೌಲೋಪನಯನ, ವಿವಾಹ, ವ್ರತಾರಂಭ, ವ್ರತೋದ್ಯಾಪನ, ಶಾಂತಿಕ, ಪೌಷ್ಟಿಕ, ಶ್ರಾದ್ಧ, ಮಹಾಲಯ, ಸಂಪಿಂಡೀಕರಣಾದಿ ಹವ್ಯ-ಕವ್ಯ ಕರ್ಮಗಳನ್ನು ಮಾಡಬಾರದು ಎಂದು ನಿಷೇಧಿಸಿದ್ದಾರೆ.

ಆದರೆ ತಾಯಿ ತಂದೆಯರ ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ಪಾಕಾದಿಗಳನ್ನು ಸಿದ್ಧಪಡಿಸಲು ಯೋಗ್ಯ ಅಧಿಕಾರಿಗಳಿದ್ದರೆ (ಅಂದರೆ ಅಕ್ಕ, ತಂಗಿ, ಹೆಣ್ಣು ಮಕ್ಕಳು ಅಥವಾ ಸಪಿಂಡದವರು ಇದ್ದರೆ) ಮಾಡಬಹುದು. ಯಾಕೆಂದರೆ ಮೃತಾಹವನ್ನು ವ್ಯತಿಕ್ರಮಿಸಿದರೆ ದೊಡ್ಡ ದೋಷ ಬರುವುದು. ಕರ್ತೃವಿಗೆ ಆಶೌಚವಿಲ್ಲದಿದ್ದರೆ ತಾಯಿ ತಂದೆಯರ ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ವ್ಯತಿಕ್ರಮಿಸಬಾರದು. ಕಾರಣ ಶ್ರಾದ್ಧವನ್ನು ಆಚರಿಸಲು ಯಾವ ಅಡ್ಡಿ ಆತಂಕಗಳು ಇಲ್ಲ.

ಮಹಾಲಯಾದಿ ಕಾಮ್ಯ ಶ್ರಾದ್ಧವನ್ನು ಮತ್ತು ಸಪಿಂಡೀಕರಣಾದಿ ನೈಮಿತ್ತಿಕ ಶ್ರಾದ್ಧವನ್ನು ಯಜಮಾನನ ಪತ್ನಿಯು ರಜಸ್ವಲೆಯಾದರೆ ಮಾಡುವಂತಿಲ್ಲ. ಅವಳ ಶುದ್ಧಿಯ ನಂತರವೇ ಆಚರಿಸಬೇಕು.

ವಿವಾಹಾದಿಗಳಲ್ಲಿ ಪ್ರಾರಂಭದ (ನಾಂದಿಯ) ನಂತರ ಸಂಸ್ಕಾರ್ಯರ ಮಾತೃ ಅಥವಾ ಯಜಮಾನನ ಪತ್ನಿ ರಜಸ್ವಲೆಯಾದರೆ ಶ್ರೀಶಾಂತಿ, ಗೋದಾನಾದಿಗಳನ್ನು ಮಾಡಿಕೊಂಡು ಕಾರ್ಯ ಮುಂದುವರಿಸಲು ಅನುಜ್ಞೆ ಕೊಟ್ಟಿದ್ದಾರೆ. ಶ್ರೀಶಾಂತಿ ಗೋದಾನಾದಿಗಳಿಂದ ರಜಸ್ವಲೆಯು ಶುದ್ಧಿಯಾಗುವುದಿಲ್ಲ, ಕರ್ಮಕ್ಕೆ ಮಾತ್ರ ಅರ್ಹತೆ ಬರುತ್ತದೆ ಎಂದು ತಿಳಿಯಬೇಕು.

ಸ್ತ್ರೀಯರು ಮಾಡುವ ವ್ರತಾದಿಗಳಲ್ಲಿ ರಜಸ್ವಲೆಯಾದರೆ ಏನೂ ಮಾಡುವಂತಿಲ್ಲ. ಕೇವಲ ಶಾರೀರಿಕ ವ್ರತನಿಯಮಗಳನ್ನು ಪರಿಪಾಲಿಸಿಕೊಂಡು ಇರಬೇಕು. ಅವಳ ಸ್ಥಾನದಲ್ಲಿ ಪತಿಯು ಪೂಜೆ ಮೊದಲಾದ ವ್ರತನಿಯಮಗಳನ್ನು ನಡೆಸಬಹುದು. ಆದರೆ ಶುದ್ಧಿಯ ನಂತರ ಪತಿಯೊಂದಿಗೆ ದಾನ ಮಾಡುವುದು ಉತ್ತಮ ಪಕ್ಷವಾಗಿದೆ. ವಿಧವೆಯಾದರೆ, ಬೇರೆ ಅರ್ಹಜನರಿಂದ ಪೂಜೆಯನ್ನು ಮಾತ್ರ ಮಾಡಿಸಿ ಶುದ್ಧಿಯ ನಂತರ ದಾನ, ಪ್ರಸಾದ ಸ್ವೀಕರಣಾದಿಗಳನ್ನು ಮಾಡಬೇಕು.

## ೩. ವಿವಾಹ ಮಧ್ಯೆ ವಧೂ ರಜಸ್ವಲಾ ವಿಚಾರ

ವಿವಾಹದ ಮಧ್ಯದಲ್ಲಿ ವಧುವು ರಜಸ್ವಲೆಯಾದರೆ ಯಜುಃ (ಜ್ಞಃ) ಪವಿತ್ರ ಮಂತ್ರದಿಂದಲೂ ಸಾವಿತ್ರೀಮಂತ್ರದಿಂದಲೂ ಪವಮಾನ ಸೂಕ್ತದಿಂದಲೂ ಸ್ನಾನಮಾಡಿಸಿ ಬೇರೆ ವಸ್ತ್ರವನ್ನು ಉಡಿಸಿ ಒಂದು ಕೋಣೆಯಲ್ಲಿ ಇಡಬೇಕು. ಅವಳ ಅನುಜ್ಞೆಯನ್ನು ಪಡೆದು ವರನು ಮಿಂದಾಹುತಿ, ಪೂರ್ಣಾಹುತಿಗಳನ್ನು ಹೋಮಿಸಿ (ಉತ್ತರ ಪರಿಷೇಕಾದಿ) ಆಗಿನ ಕಾರ್ಯವನ್ನು ಮುಗಿಸಬೇಕು.

ನಂತರ ವಧುವಿಗೆ ಶುದ್ಧಿಯಾದ ಮೇಲೆ (ಐದು ದಿವಸದ ನಂತರ) ಅವಳೊಂದಿಗೆ ಅಲ್ಲಿಯೇ ಮಾಡತಕ್ಕ ಹೋಮಾದಿಗಳನ್ನು ಮುಗಿಸಿ ವಿವಾಹವನ್ನು ಸಾಂಗ (ಪೂರ್ತಿ) ಗೊಳಿಸಬೇಕು. ಈ ಮೇಲಿನ ಕ್ರಮದಿಂದ ವಧುವು ಶುದ್ಧಿಯಾಗುವುದಿಲ್ಲ. ಕರ್ಮಗಳಿಗೆ ಮಾತ್ರ ಶುದ್ಧಿ (ಅರ್ಹತೆ) ಎಂದು ತಿಳಿಯಬೇಕು. ಯಜಮಾನನ ಪತ್ನಿ ರಜಸ್ವಲೆಯಾದರೆ ಶ್ರೀಶಾಂತಿ ಗೋದಾನಾಗಳಿಂದ ಕರ್ಮಮಾತ್ರ ಶುದ್ಧಿಯಾಗುವುದು ಹೇಗೋ ಹಾಗೆಯೇ ಇಲ್ಲಿಯೂ ಸಹ ಕರ್ಮಮಾತ್ರ ಶುದ್ಧಿಯೆಂದು ತಿಳಿಯಬೇಕು. ವಧುವಿಗೆ ಶುದ್ಧಿಯಾಗುವುದೆಂದು ಯಾರೂ ಭ್ರಮಿಸಬಾರದು. ಶತಶ್ಲೋಕೀ, ಅಖಂಡಾದರ್ಶ, ವಿಜ್ಞಾನೇಶ್ವರ, ವೆಂಕಟೇಶಿ ಪ್ರಯೋಗಮಾಲಾ, ಬೋಧಾಯನ ಬ್ರಹ್ಮಕರ್ಮ ಸಮುಚ್ಚಯ ಮೊದಲಾದ ಎಲ್ಲಾ ಗ್ರಂಥಗಳಲ್ಲಿಯೂ ಒಂದೇ ರೀತಿಯ ಆಧಾರ ವಚನಗಳು ಕಂಡು ಬರುತ್ತವೆ.

---

ವಿವಾಹೇ ವಿತತೇ ಯಜ್ಞೇ ಹೋಮಕಾಲ ಉಪಸ್ಥಿತೇ ।
ಕನ್ಯಾಮೃತುಮತೀಂ ದೃಷ್ಟ್ವಾ ಕಥಂ ಕುರ್ವಂತಿ ಯಾಜ್ಞಿಕಾಃ ॥

ಯಜುಃ (ಷ್ಟ)ಪವಿತ್ರಮಂತ್ರೇಣ ಸಾವಿತ್ರೀಪ್ಲುತವಾರಿಣಾ ।
ಅನೇನ ಚಾನುವಾಕೇನ ಪವಮಾನಃ ಸುವರ್ಜನಃ ।
ಸ್ನಾಪಯಿತ್ವಾ ತು ವಿದ್ವದ್ಭಿಃ ಅನ್ಯವಸ್ತ್ರಾಮಲಂಕೃತಾಮ್ ॥

ಪೂರ್ಣಾಹುತ್ಯಾ ಚ ಮಿಂದಾಭ್ಯಾಂ ಹುತ್ವಾನುಜ್ಞಾಪ್ಯ ತಾಂ ತತಃ ।
ತಯಾ ಸಹ ತತಸ್ತತ್ರ ಹೋಮಶೇಷಂ ಸಮಾಪಯೇತ್ ॥ಇತಿ॥

ಇಲ್ಲಿ ತತಃ-ತತಃ ಎಂಬ ಶಬ್ದವು ವಧೂ ಶುದ್ಧಿಯ ನಂತರವೆಂದು ಅರ್ಥವಾಗಿದೆಯೆಂದು ಹಿರಿಯ ವಿದ್ವಾಂಸರ ಅಭಿಪ್ರಾಯವಿದೆ.

## ೪. ಪ್ರಾರಂಭಿಸಿದ ಕರ್ಮಮಧ್ಯೆ ಆಶೌಚ ಬಂದರೆ

ಚೌಲ, ಉಪನಯನ, ವಿವಾಹ, ದೇವಕಾರ್ಯ, ಉತ್ಸವ, ಕೃಚ್ಛ್ರ, ಚಾಂದ್ರಾಯಣಾದಿ ವ್ರತಗಳು, ದೀರ್ಘವ್ರತ, ದೀರ್ಘವಾದ ಮಂತ್ರಪುರಶ್ಚರಣೆ, ಚಂಡೀಹವನ, ರುದ್ರಹವನ, ಯಜ್ಞಯಾಗಾದಿಗಳು, ಪವಿತ್ರ ಕರ್ಮಗಳು, ಶ್ರಾದ್ಧಾದಿಗಳು, ವಿಧಿಯಂತೆ (ವಿಧಿವತ್) ಪ್ರಾರಂಭದ ನಂತರ ಸಪಿಂಡಾದಿಗಳ ಜನನಮರಣಾಶೌಚಗಳು ಸಂಭವಿಸಿದರೆ ಸಮಾಪ್ತಿಯವರೆಗೆ ಆ ಆಶೌಚವು ತಗಲುವುದಿಲ್ಲ (ಪ್ರಾರಂಭ ಮಾಡಿದ ಕರ್ಮವನ್ನು ಮುಂದುವರಿಸಬಹುದು).

ಇಲ್ಲಿ (ವಿಧಿವತ್) ವಿಧಿಯಂತೆ ಪ್ರಾರಂಭವೆಂದರೇನು ? ಯಜ್ಞಯಾಗ ಹೋಮಹವನಾದಿ ಕರ್ಮಗಳಲ್ಲಿ ಋತ್ವಿಗ್ವರಣ (ಮಧುಪರ್ಕ ಗ್ರಹಣ)ವು ಪ್ರಾರಂಭವೆನಿಸುವುದು. ದೀರ್ಘಕಾಲದ ವ್ರತಸತ್ರಗಳಲ್ಲಿ ಮಹಾಸಂಕಲ್ಪವು (ಕೌತುಕ ಸೂತ್ರ ಧಾರಣೆಯು) ಪ್ರಾರಂಭವೆನಿಸುವುದು. ಚೌಲೋಪನಯನ ವಿವಾಹಾದಿ ಕರ್ಮಗಳಲ್ಲಿ ನಾಂದಿ ಸಮಾರಾಧನೆಯು (ಕುಲದೇವತಾ ಸ್ಥಾಪನೆ, ಮಾತೃಕಾಪೂಜೆ, ಮಂಡಪ ಸ್ಥಾಪನೆಯು) ಪ್ರಾರಂಭವೆನಿಸುವುದು. ಶ್ರಾದ್ಧಾದಿ ಪಿತೃಕರ್ಮಗಳಲ್ಲಿ ಪಾಕಪರಿಕ್ರಿಯೆಯು (ಪಾಕಪ್ರೋಕ್ಷಣೆ ಕ್ಷಣಾಹ್ವಾನ ಪಿತೃಗಳ ಆವಾಹನೆಯು) ಪ್ರಾರಂಭವೆನಿಸುವುದು.

ಸಮಾಪ್ತಿಯು ಎಲ್ಲಿಗೆ ಆಗುವುದು? ಯಜ್ಞಯಾಗಾದಿ ಕರ್ಮಗಳಲ್ಲಿ ಅವಭೃತ ಸ್ನಾನ ಸಮಾಪ್ತಿಯೆನಿಸುವುದು. ವ್ರತಸತ್ರಗಳಲ್ಲಿ ಕೌತುಕ ಸೂತ್ರ ವಿಸರ್ಜನವು ಸಮಾಪ್ತಿಯು. ವಿವಾಹಾದಿಗಳಲ್ಲಿ ದೇವಕೋತ್ಥಾಪನೆ ಮಾತೃಕಾ ವಿಸರ್ಜನೆ ಮಂಡಪೋದ್ವಾಸನೆಯು ಸಮಾಪ್ತಿಯೆನಿಸುವುದು. ಶ್ರಾದ್ಧಾದಿ ಪಿತೃಕರ್ಮಗಳಲ್ಲಿ ಪಿತೃಗಳ ಉದ್ವಾಹನೆಯು ಸಮಾಪ್ತಿಯು. ಕರ್ಮಗಳು ವಿಧಿಯಂತೆ ಪ್ರಾರಂಭವಾಗಿದ್ದರೆ ಸಮಾಪ್ತಿಯವರೆಗೆ ತತ್ಕಾಲದಲ್ಲಿ ಶುದ್ಧಿಯು ಇರುತ್ತದೆ. ಮತ್ತು ಕರ್ಮಗಳನ್ನು ಸಮಾಪ್ತಿಯವರೆಗೆ ಮುಗಿಸಬಹುದು. ಆಶೌಚವು ತಗಲುವದಿಲ್ಲವೆಂದು ಶಾಸ್ತ್ರಕಾರರು ಹೇಳಿರುವರು.

ಕರ್ಮಸಮಾಪ್ತಿಯ ನಂತರ ಆಶೌಚವು ಮುಂದೆ ಅವಶಿಷ್ಟವುಳಿದರೆ ಆ ಅವಶಿಷ್ಟ ಆಶೌಚವನ್ನು ಬಳಸಲೇಬೇಕು. (ಮರಣದಲ್ಲಿ ಮಾತ್ರ) ಆಶೌಚವು ಸಂಪೂರ್ಣ ಕಳೆದುಹೋಗಿದ್ದರೆ ಹಿಂದೆ ಹೇಳಿದ ಮರಣ ಅತಿಕ್ರಾಂತಾಶೌಚ ಪ್ರಕರಣದಂತೆ (ನಂ. ೭ ಸಂಪಿಂಡರಿಗೆ) ಹೇಳಿದಂತೆ ಬಳಸಿ ಶುದ್ಧರಾಗಬೇಕು.

ವಿವಾಹೋತ್ಸವಗಳಲ್ಲಿ ಎಷ್ಟು ಜನರಿಗೆ ಆಶೌಚವಿಲ್ಲವೆಂದರೆ, ಮುಖ್ಯ ಕರ್ತೃಗಳಾದ ಯಜಮಾನ ದಂಪತಿಗಳಿಗೆ ಮತ್ತು ಉದ್ದಿಷ್ಟ ವ್ಯಕ್ತಿಗೆ ಮೂರು ಜನರಿಗೆ ಮಾತ್ರ ಆಶೌಚವಿಲ್ಲವೆಂದು ತಿಳಿಯಬೇಕು. ಇನ್ನುಳಿದವರಿಗೆ ಆಶೌಚವಿರುತ್ತದೆ ಎಂದು ಹೇಳಿರುವರು. ವಿಧಿಯಂತೆ ಪ್ರಾರಂಭವಾಗಿದ್ದರೂ ಸಹ ದಿನಾಂತರ ಮುಹೂರ್ತಾಂತರ ಸಿಗುವ ವ್ಯವಸ್ಥೆ ಇದ್ದರೆ ಕಾರ್ಯಕ್ರಮವನ್ನು ನಿಲ್ಲಿಸಿದರೆ ದೋಷವಿಲ್ಲ. ಮುಂದೆ ಪುನಃ ಹೊಸದಾಗಿ ಆಚರಿಸಬೇಕಾಗುವುದು.

ಇಲ್ಲಿಯ (ಆಶೌಚವಿಲ್ಲವೆಂಬ) ವ್ಯವಸ್ಥೆಯ ಬಗ್ಗೆ ಬಹಳ ಸೂಕ್ಷ್ಮವಾಗಿ ವಿಚಾರಿಸಬೇಕು. ಎಲ್ಲಾ ಸರಕುಸಾಮಾನು ಸಾಂಬಾರಗಳು ಕೂಡಿದ್ದರೆ ದಿನಾಂತರ ಮುಹೂರ್ತಾಂತರ ಸಿಗದಿದ್ದರೆ ಸಂಕಟ, ಅತಿಸಂಕಟ ಪ್ರಸಂಗದಲ್ಲಿ ಬೇರೆ ಮಾರ್ಗವೇ ಇಲ್ಲದಿದ್ದರೆ ಆಪತ್ತು, ಅತ್ಯಾಪತ್ತು ಪ್ರಸಂಗದಲ್ಲಿ ಎಂದು ಪ್ರಾರಂಭಿಕ ಕರ್ಮಗಳಿಗೂ ವಿಶೇಷಣರೂಪವಾದ ವಿಶೇಷ ಶಬ್ದಗಳನ್ನು ಜೋಡಿಸಿವೆ. ಕೆಲವರು ಹೇಳುವಂತೆ ಚೌಲೋಪನಯನಾದಿ ಕೆಲವು ಕರ್ಮಗಳಿಗೆ ಮಹಾಪತ್ತು ಸಂಭವಿಸುವದಿಲ್ಲ. ದಿನಾಂತರ ಮುಹೂರ್ತಾಂತರದಲ್ಲಿ ನಡೆಸಬಹುದು. ಅಷ್ಟು ದೊಡ್ಡ ಹಾನಿಯೇನು ಸಂಭವಿಸುವದಿಲ್ಲ ಎಂದು ಹೇಳುವರು. ನಿಜವಾಗಿಯೂ (ಆತ್ಮವತ್ತಾಗಿ) ಮಹಾಪತ್ತು ಸಂಭವಿಸಿದರೆ ಮಾತ್ರ ಆಶೌಚವಿಲ್ಲ ಎಂಬ ಶಾಸ್ತ್ರವಾಕ್ಯವು ಜಾಗೃತವಾಗಿ ಪ್ರವೇಶಿಸುತ್ತದೆಯೆಂದು ತಿಳಿಯಬೇಕು. ಧರ್ಮಸಿಂಧುವಿನಲ್ಲಿ ಆಶೌಚವಿಲ್ಲವೆಂಬ ಅಪವಾದ ಶಾಸ್ತ್ರವನ್ನು ಅತ್ಯಾಪತ್ಕಾಲದಲ್ಲಿಯೇ ಉಪಯೋಗಿಸಬೇಕೆಂದು ಹೇಳಿರುವರು. ಏಕೆಂದರೆ ಆಶೌಚದಲ್ಲಿ ಏನೂ ಧಾರ್ಮಿಕ ಕರ್ಮಗಳನ್ನು ಮಾಡಬಾರದು ಎಂದು ನಿಷೇಧಮಾಡುವ ಶಾಸ್ತ್ರವು ಬಲಿಷ್ಠವೆಂದು ಸ್ಪಷ್ಟವಾಗಿಯೇ ತಿಳಿಸಿದೆ. ಆಶೌಚವಿಲ್ಲವೆಂಬ ಈ ಎಲ್ಲಾ ನಿರ್ಣಯಗಳು ಕೇವಲ ಸಪಿಂಡ ಸಕುಲ್ಯಾದಿಗಳ ಮತ್ತು ಲಘು ಆಶೌಚಿಗಳ ಜನನ ಮರಣಾಶೌಚಗಳಿಗೆ ಮಾತ್ರ ಸಂಬಂಧಿಸಿದ್ದು ಆಗಿರುತ್ತದೆ ಎಂದು ತಿಳಿಯಬೇಕು. ಸ್ವಕೀಯಾದಿ ಸಮೀಪದವರು ಮೃತಪಟ್ಟರೆ ಅಥವಾ ಜನನವಾದರೂ ಆಶೌಚವನ್ನು ಬಳಸುವುದು ಯುಕ್ತವ್ಯವಸ್ಥೆಯಾಗಿರುತ್ತದೆ ಎಂದು ದಾಕ್ಷಿಣಾತ್ಯ ಹಿರಿಯ ವಿದ್ವಾಂಸರು ಹೇಳುವರು.

ಕೃಚ್ಛ್ರಾಚರಣೆ ಪೂರ್ವಕ ಪ್ರಾಯಶ್ಚಿತ್ತ ಗಣಹೋಮ, ಕೂಷ್ಮಾಂಡ, ಬ್ರಹ್ಮಕೂರ್ಚ ಹೋಮಾದಿಗಳಿಂದ ದೇಹವನ್ನು ಶುದ್ಧೀಕರಿಸಿಕೊಂಡವನಿಗೆ ತಪೋನಿಯಮದಿಂದ ದೀರ್ಘಕಾಲದ ಮಂತ್ರಪುರಶ್ಚರಣೆ ಮಾಡುವವನಿಗೆ ... ರಾಜಕಾರ್ಯದಲ್ಲಿ

ನಿಯುಕ್ತಿಯಾದವನಿಗೆ ಬ್ರಹ್ಮನಿಷ್ಠನಿಗೆ (ಸನ್ಯಾಸಿಗಳಿಗೆ) ವಾರ್ತೆ ತಿಳಿದಕೂಡಲೇ ಸ್ನಾನ ಮಾಡಿದರೆ ಆಶೌಚದಿಂದ ಶುದ್ಧಿಯಾಗುವುದು. (ಸದ್ಯಃ ಶೌಚವೆಂದು ಹೇಳಿದೆ) ಈ ಮೇಲಿನವರು ತಾವು ನಡೆಸಲೇಬೇಕಾದ ಕಾರ್ಯದಲ್ಲಿ ಶುದ್ಧರಾಗಿರುತ್ತಾರೆ.

ಜಪ ಪಾರಾಯಣ ಶ್ರಾದ್ಧಾದಿ ಕರ್ಮಗಳಲ್ಲಿ ಪ್ರಾರಂಭದ ನಂತರ ಸಮಾಪ್ತಿಯೊಳಗೆ ಮಲಮೂತ್ರಾದಿಗಳಿಂದ ಅಶುಚಿಯಾದರೆ ಪುನಃ ಸ್ನಾನ ಮಾಡಿ ಪುನಃ ಪ್ರಾರಂಭದಿಂದ ಸಮಾಪ್ತಿಯವರೆಗೂ ಮುಗಿಸಬೇಕು. (ಪುನಃ ಸಮಗ್ರವಾಗಿ ಆಚರಿಸಬೇಕು) ವ್ರತಾದಿಗಳಲ್ಲಿ ಆಶೌಚ ಸಂಭವಿಸಿದರೆ, ಉಪವಾಸಾದಿ ಶಾರೀರಿಕ ವ್ರತಕೃತ್ಯಗಳನ್ನು ಮಾತ್ರ ಮಾಡಬೇಕು. ಯೋಗ್ಯ ಪ್ರತಿನಿಧಿಯಿಂದ ಪೂಜಾದಿಗಳನ್ನು ಮಾಡಿಸಿದರೂ ದಾನಾದಿಗಳನ್ನು ಶುದ್ಧಿಯ ನಂತರ ಸ್ವಯಂ ಆಚರಿಸಬೇಕು.

---

**ಬ್ರಾಹ್ಮೇ:-** ಯಜ್ಞಾರ್ಥಂ ಬಹುಸಂಭಾರಸಂಭವಸ್ಯಾಪಿ ನೋ ಭವೇತ್ ।
ಅಥ ದೇವಪ್ರತಿಷ್ಠಾಯಾಂ ಗಣಯಾಗಾದಿಕರ್ಮಣಿ ॥

ಶ್ರಾದ್ಧಾದಿ ಪಿತೃಯಜ್ಞೇಷು ಕನ್ಯಾದಾನೇ ಚ ನೋ ಭವೇತ್ ।
ನಿತ್ಯಂ ವ್ರತಪರಸ್ಯಾಪಿ ಕೃಚ್ಛ್ರಚಾಂದ್ರಾಯಣಾದಿಷು ॥

ಪ್ರವೃತ್ತೇ ಕೃಚ್ಛ್ರಹೋಮಾದೌ ಬ್ರಾಹ್ಮಣಾದಿಷು ಭೋಜನೇ ।
ಗೃಹೀತನಿಯಮಸ್ಯಾಪಿ ನ ಸ್ಯಾದನ್ಯಸ್ಯ ಕಸ್ಯಚಿತ್ ॥ (ಕುತ್ರಚಿತ್) ॥

ತಾವದ ಗೃಹೀತ ದೀಕ್ಷಸ್ಯ ತ್ರೈವಿದ್ಯಸ್ಯ ಮಹಾಮಖೇ ॥
ಸ್ನಾನಂ ತ್ವವಭೃತಂ ಯಾವತ್ ತಾವತ್ತಸ್ಯ ನ ವಿದ್ಯತೇ ।

ಜನನೇ ಮರಣೇ ಚೈವ ತ್ರಿಷ್ವಾಶೌಚಂ ನ ವಿದ್ಯತೇ ॥
ಯಜ್ಞೇ ವಿವಾಹಕಾಲೇ ಚ ದೇವಯಾಗೇ ತಥೈವ ಚ ।

ಗೃಹೀತಮಧುಪರ್ಕಸ್ಯ ಯಜಮಾನಾಚ್ಚ ಋತ್ವಿಜಾಂ ।
ಪಶ್ಚಾತ್ಪತಿತಮಾಶೌಚಂ ನ ಭವೇದಿತಿ ನಿಶ್ಚಯಮ್ ॥

**ಪರಾಶರಃ:-** ದೀಕ್ಷಿತೇಷ್ವಭಿಷಿಕ್ತೇಷು ವ್ರತತೀರ್ಥಪರೇಷು ಚ ।
ತಪೋದಾನಪ್ರಸಕ್ತೇಷು ನಾಶೌಚಂ ಮೃತಸೂತಕೇ ॥

**ಯಾಜ್ಞವಲ್ಕ್ಯಃ:-** ಋತ್ವಿಜಾಂ ದೀಕ್ಷಿತಾನಾಂ ಚ ದೇಶಾಂತರಮೃತೌ ತಥಾ ।
ವ್ರತಿನಾಂ ಸತ್ರಿಣಾಂ ಚೈವ ಸದ್ಯಃ ಶೌಚಂ ವಿಧೀಯತೇ ॥

**ತಾತ್ಪರ್ಯಬೋಧಿನೀ:-** ಕೃಚ್ಛ್ರಚಾಂದ್ರಾಯಣ, ಯಜ್ಞ, ಉಪನಯನ, ವಿವಾಹ, ವ್ರತಾದಿ ನಿಯತ ಕರ್ಮಣಾಂ ಉಪಕ್ರಮಾನಂತರಮ್ ಅಘಾಽಗಮೇ ತತ್ಸಮಾಪ್ತ್ಯನಂತರಮ್ ಅವಶಿಷ್ಟ ದಿನಾನ್ಯೇವಾಽಶೌಚಂ ಗ್ರಾಹ್ಯಮ್ ॥ ಸಮಾಪ್ತೇಃ

ಪೂರ್ವಮ್ ಅಘಸ್ಯ ಅಸ್ಪೃಶ್ಯವಿಧಾನಾತ್ ಸಮಾಪ್ತೇಃ ಪರಂ ಅತೀತಾಶೌಚಗ್ರಹಣೇ ಅತೀತಪೂರ್ಣಮ್ ಇತ್ಯಾದಿ ಪೂರ್ವೋಕ್ತರೀತ್ಯಾ ಗ್ರಾಹ್ಯಮಿತಿ ॥

**ವಿಷ್ಣು:**– ನ ದಾನಪ್ರತಿಗ್ರಹೋತ್ಸವೇಷು ವಿವಾಹೇಚ ನ ದೇಶವಿಭ್ರಮೇ ನಾಪ್ಯಾಪದಿ ಕಷ್ಟಾಯಾಂ ನಾಽಶೌಚಮ್ ॥

**ಜಾಬಾಲಿ:**– ಕರ್ಮಮಧ್ಯೇ ತು ಯಃ ಕಶ್ಚಿತ್ ಯದಿ ಸ್ಯಾದಶುಚಿರ್ನರಃ ।
ಸ್ನಾತ್ವಾ ಕರ್ಮಪುನಃ ಕುರ್ಯಾದನ್ಯಥಾ ವಿಫಲಂ ಭವೇತ್ ॥
ಏತದ್ವಚನಂ ತು ಮಲಮೂತ್ರಾದಿ ವಿಷಯಕಮಿತ್ಯನುಸಂಧೇಯಮಿತಿ ॥

**ಶತಕೇ:**– ಕೃಚ್ಛ್ರದೇವೋತ್ಸವಶ್ರಾದ್ಧದಾನಹೋಮತಪೋಧ್ವರೇ ।
ಪ್ರಾರಬ್ಧೇ ತತ್ತ್ರವೃತ್ತಾನಾಂ ಸದ್ಯಃ ಶೌಚಮಘಾಗಮೇ ॥

**ಕೌರ್ಮೇ:**– ಕಾಮ್ಯೋಪವಾಸೇ ಪ್ರಕ್ರಾಂತೇ ತ್ವಂತರಾಮೃತಸೂತಕೇ ॥
ತತ್ರ ಕಾಮ್ಯವ್ರತಂ ಕಾರ್ಯಂ ದಾನಾರ್ಚನವಿವರ್ಜಿತಮ್ ॥

ಅತ್ರ–ಜಪ–ಪೂಜಾ–ಅರ್ಚನ–ದಾನಾದಿಕಂ ಹಿತ್ವಾ ಕೇವಲಂ ಶಾರೀರಿಕ ಉಪವಾಸಾದಿ ವ್ರತಕೃತ್ಯಂ ಕಾರ್ಯಮಿತಿ ತಸ್ಯಾರ್ಥಃ ॥ ಕೇಚಿತ್ ಪ್ರತಿನಿಧಿನಾ ಪೂಜಾದಿಕಂ ಕಾರಯಂತಿ, ತಥಾಪಿ ದಾನಾದಿಕಂ ಶುದ್ಧ್ಯನಂತರಂ ಸ್ವಯಮೇವ ಕುರ್ವಂತಿ ॥

**ಸ್ಮೃತಿಸಾರಸರ್ವಸ್ವ:**– ಸಪಿಂಡಜನನಮರಣಾಶೌಚೇ ಸಂಭವೇ ಸದ್ಯಃ ಶೌಚಮ್। ಸ್ನಾನಂ ಕೃತ್ವಾ ಕೃಚ್ಛ್ರಾದ್ಯನುಷ್ಠೇಯಮಿತ್ಯರ್ಥಃ ॥ ಅತ್ರ ಸ್ನಾನಂ ತು ಶಾವವಿಷಯಂ ನ ತು ಪ್ರಸವವಿಷಯಂ ಪಿತ್ರ್ಯವ್ಯತಿರಿಕ್ತಸ್ಯ ಸ್ನಾನವಿಧಾನಾಭಾವತ್ ॥

**ವಿಷ್ಣು:**– ಬಹುಕಾಲಿಕಸಂಕಲ್ಪೋ ಗೃಹೀತಶ್ಚ ಪುರಾ ಯದಿ ॥
ಸೂತಕೇ ಮೃತಕೇ ಚೈವ ವ್ರತಂ ತನ್ನೈವ ದುಷ್ಯತಿ ॥
ವ್ರತಯಜ್ಞವಿವಾಹೇಷು ಶ್ರಾದ್ಧೇ ಹೋಮೇಽರ್ಚನೇ ಜಪೇ ।
ಪ್ರಾರಬ್ಧೇ ಸೂತಕಂ ನ ಸ್ಯಾತ್ ಅನಾರಬ್ಧೇ ತು ಸೂತಕಮ್ ।
ಅತ್ರ ಸ ಏವ ಪ್ರಾರಂಭಶಬ್ದಾರ್ಥಂ ಪ್ರಾಹ–

**ವಿಷ್ಣು:**– ಪ್ರಾರಂಭೋ ವರಣಂ ಯಜ್ಞೇ ಸಂಕಲ್ಪೋ ವ್ರತಸತ್ರಯೋಃ ।
ನಾಂದೀಮುಖಂ ವಿವಾಹಾದೌ ಶ್ರಾದ್ಧೇ ಪಾಕಪರಿಕ್ರಿಯಾ ॥

**ಧರ್ಮಸಿಂಧು:**– ಸಂಕಲ್ಪಿತೇ ಪುರಶ್ಚರಣಜಪೇ ಸಂಕಲ್ಪಿತಹರಿವಂಶಶ್ರವಣಾದೌ ಚ ಪ್ರಾರಂಭೋತ್ತರಂ ನಾಶೌಚಮ್ । ಅತ್ರ ಸರ್ವೋಪ್ಯಯಂ ಆಶೌಚಾಪವಾದೋ ಅನನ್ಯಗತಿಕತ್ವೇ ಆರ್ತೌ ಚ ಜ್ಞೇಯಃ ॥ ತೇನ ಅನನ್ಯಗತಿಕತ್ವಾದಿಕಂ ಸಮ್ಯಕ್ ಆಲೋಚ್ಯೈವ ಆಶೌಚಾಭಾವೋ ಯೋಜ್ಯಃ ॥ ನಿಷೇಧಸ್ಯ ಬಲೀಯಸ್ತ್ವಾತ್ ।

**ಯಮಃ**:– ಜಪೋ ಹೋಮಾರ್ಚನವಿಧಿಃ ಕಾರ್ಯೋ ದೀಕ್ಷಾನ್ವಿತೈರ್ನರೈಃ ।
ನಾಸ್ತಿ ಪಾಪಂ ಯತಸ್ತೇಷಾಂ ಸೂತಕಂ ವಾ ಯತಾತ್ಮನಾಮ್ ॥

**ಗಾರುಡೇ**:–ವ್ರತಿನೋ ಮಂತ್ರಪೂತಸ್ಯ ಸಾಗ್ನಿಕಸ್ಯ ದ್ವಿಜಸ್ಯ ಚ ।
ಬ್ರಹ್ಮನಿಷ್ಠಸ್ಯ ಯತಿನಃ ನ ಹಿ ರಾಜ್ಞಾಂ ಚ ಸೂತಕಮ್ ॥
ಏತೇ ಸ್ವ ಸ್ವ ಕೃತ್ಯೇ ಶುದ್ಧಾಃ ಇತಿ ॥

**ಸ್ಮೃತೌ**:– ಸ್ವ ಸ್ವ ಕೃತ್ಯೇ ಸದಾ ಶುದ್ಧಾಃ ಅಶುದ್ಧಾ ಅನ್ಯಕರ್ಮಸು । (ಇತ್ಯರ್ಥಃ)

**ಧರ್ಮಾನುಶಾಸನಮ್** :–
ಯಸ್ತಪೋನಿಯತೋ ಮಂತ್ರಪುರಶ್ಚರಣಮಾಚರೇತ್ ।
ಮಾತಾಪಿತ್ರೋರ್ವಿನಾಽಶೌಚದೋಷೇಣ ಸ ನಲಿಪ್ಯತೇ ॥ ಇತಿ ॥

## ೫. ಶ್ರಾದ್ಧಾದಿಗಳಲ್ಲಿ ಆಶೌಚ ಬಂದರೆ

ಪ್ರತಿಸಾಂವತ್ಸರಿಕ ಶ್ರಾದ್ಧ ಮಾಸಿಕಾದಿಗಳಲ್ಲಿ, ವಿಧಿವತ್ ಪ್ರಾರಂಭವಾಗಿದ್ದಾರೆ, ಆಶೌಚವು ಬಂದರೆ ಆ ಶ್ರಾದ್ಧಕರ್ಮವನ್ನು ಸಂಪೂರ್ಣ ಮುಗಿಸಲೇ ಬೇಕು. ಮಧ್ಯಂತರದಲ್ಲಿ ಬಿಡುವಂತಿಲ್ಲ. ಯಾಕೆಂದರೆ ತತ್ಕಾಲದಲ್ಲಿ ಯಜಮಾನನು ಮತ್ತು ಬ್ರಾಹ್ಮಣರು ಶುದ್ಧರಾಗಿಯೂ ಆ ಕಾಲದಲ್ಲಿ ಮಾಡತಕ್ಕ ಕರ್ಮಗಳಿಗೆ ಅರ್ಹರಾಗಿಯೂ ಇರುತ್ತಾರೆ. ವಿಧಿವತ್ ಪ್ರಾರಂಭವೆಂದರೇನು? ಸಮಾಪ್ತಿ ಎಲ್ಲಿಗೆ ಆಗುವುದು ಎಂಬುದನ್ನು ಹಿಂದಿನ ನಂ.೪ ರಲ್ಲಿಯೇ ತಿಳಿಸಿದೆ. ಪಾಕಪ್ರೋಕ್ಷಣೆಯು ಪ್ರಾರಂಭವಾದರೆ ಪಿತೃಗಳ ಉದ್ವಾಹನೆಯು ಸಮಾಪ್ತಿಯೆಂದು ತಿಳಿಸಿದೆ. ಕೆಲವರು ಕ್ಷಣಾಹ್ವಾನ ಅಂದರೆ, ಶ್ರಾದ್ಧಕರ್ಮದಲ್ಲಿ ನಿಯುಕ್ತಿಗೊಳಿಸುವುದು. ಪೂರ್ವದಿವಸವೇ ನಿಮಂತ್ರಣ ಕೊಟ್ಟರೂ ಕ್ಷಣಾಹ್ವಾನವೂ ತತ್ಕಾಲದಲ್ಲಿಯೇ ಆಗಬೇಕು. ಕ್ಷಣಾಹ್ವಾನವೂ ಪ್ರಾರಂಭವೆಂದೂ ಹೇಳುವರು. ಮತ್ತೆ ಕೆಲವರು ದೇಹದಲ್ಲಿ (ಗೇಹದಲ್ಲಿ) ಪಿತೃಗಳು ಸೇರಿದ ನಂತರ (ಆವಾಹನೆ) ಪ್ರಾರಂಭವೆಂದು ಹೇಳುವರು. ಈ ಮೂರು ಕರ್ಮವಿಶೇಷಗಳು ಒಂದು ಘಟಿ ಪ್ರಮಾಣದ ಕಾಲದಲ್ಲಿ ಒಂದರ ಹಿಂದೆ ಒಂದರಂತೆ ಆನುಪೂರ್ವಿಯಾಗಿ ನಡೆಯುವುದು. ಒಟ್ಟಾರೆ ಪ್ರಾರಂಭದ ನಂತರ ಸಮಾಪ್ತಿಯವರೆಗೆ ಯಜಮಾನನಿಗೂ ಬ್ರಾಹ್ಮಣರಿಗೂ ಯಾವುದೇ ಆಶೌಚವು ತಗಲುವುದಿಲ್ಲ. ಶ್ರಾದ್ಧವನ್ನು ಸಂಪೂರ್ಣ ಮುಗಿಸಬೇಕು. ಪಿತೃಗಳ ಉದ್ವಾಹನೆಯ ನಂತರ ಶ್ರಾದ್ಧವು ಸಮಾಪ್ತಿಯಾಗುವುದು. ಮಾಸಿಕ ಮೊದಲಾದುವುಗಳಲ್ಲಿಯೂ ಇದೇ ನ್ಯಾಯವನ್ನು ಅನುಸರಿಸಬೇಕು.

ಕ್ಷಣಾಹ್ವಾನ ಪಾದಪ್ರಕ್ಷಾಲನದ ಪೂರ್ವದಲ್ಲಿ ಆಶೌಚಬಂದರೆ ಆ ದಿವಸ ಶ್ರಾದ್ಧವನ್ನು ಬಿಟ್ಟು ಶುದ್ಧಿಯ ನಂತರ ಆಚರಿಸಬೇಕು. ಶ್ರಾದ್ಧದ ಮಧ್ಯದಲ್ಲಿ ಯಜಮಾನರು ಅಥವಾ ಬ್ರಾಹ್ಮಣರು ಮಲ ಮೂತ್ರಗಳಿಂದ ಅಶುಚಿಗಳಾದರೆ ಆ ದಿವಸ ಬಿಟ್ಟು (ಪ್ರಾಯಶ್ಚಿತ್ತ ಮಾಡಿಕೊಂಡು) ಮಾರನೇ ದಿವಸ ಶ್ರಾದ್ಧವನ್ನು

ಆಚರಿಸಬೇಕು. ಇತರ ಜಪ ಪಾರಾಯಣಾದಿಗಳಲ್ಲಿಯೂ ಸ್ನಾನದಿಂದ ಶುದ್ಧರಾಗಿ ಪುನಃ ಆದಿಯಿಂದ ಪ್ರಾರಂಭಿಸಿ ಸಮಗ್ರವಾಗಿ ಕರ್ಮವನ್ನು ಮುಗಿಸಬೇಕು ಎಂದು ಹೇಳಿರುವರು.

ಪ್ರಾರಂಭಕ್ಕಿಂತಲೂ ಮೊದಲು ಆಶೌಚವು ಬಂದರೆ ಶುದ್ಧಿಯ ನಂತರ ಶ್ರಾದ್ಧವನ್ನು ಆಚರಿಸಬೇಕು. ಮಾಸಿಕ ಅನುಮಾಸಿಕ ಶ್ರಾದ್ಧಗಳನ್ನು ಶುದ್ಧಿಯ ನಂತರವೂ ಆಚರಿಸಬಹುದು. ಅಥವಾ ಮುಂದಿನ ಮಾಸಿಕ ಶ್ರಾದ್ಧದಲ್ಲಿ ಎರಡೂ ಮಾಸಿಕ ಶ್ರಾದ್ಧವನ್ನು ಸೇರಿಸಿ ಸಹತಂತ್ರದಿಂದ ಆಚರಿಸಬಹುದೆಂದು ಧರ್ಮಸಿಂಧು, ಪುರುಷಾರ್ಥ ಚಿಂತಾಮಣಿ ಮೊದಲಾದ ಗ್ರಂಥಗಳಲ್ಲಿ ತಿಳಿಸಿರುವರು.

ಅವಿಭಕ್ತ ಕುಟುಂಬದಲ್ಲಿ ನಾಲ್ಕಾರು ಜನ ಅಣ್ಣತಮ್ಮಂದಿರು ಇದ್ದು ಅವರೊಳಗೆ ಯಾರಿಗಾದರೂ ಒಬ್ಬನಿಗೆ ಆಶೌಚ ಬಂದರೆ ಆ ಆಶೌಚದ ಶುದ್ಧಿಯ ನಂತರ ಶ್ರಾದ್ಧವನ್ನು ಆಚರಿಸುವದು ಯುಕ್ತ ವ್ಯವಸ್ಥೆಯಾಗಿರುತ್ತದೆ. ಯಾಕೆಂದರೆ ಒಬ್ಬನಿಗೆ ಮಾತಾಪಿತೃಗಳ ಶ್ರಾದ್ಧವು ತಪ್ಪಿಹೋಗುವುದು. ಅವನು ಶುದ್ಧಿಯ ನಂತರ ಬೇರೆಯಾಗಿ ಆಚರಿಸುವುದು ಅವಿಭಕ್ತ ಕುಟುಂಬದಲ್ಲಿ ಸರಿಯಾಗುವುದಿಲ್ಲ. ಕೆಲವರು ಮುಖ್ಯಕರ್ತೃ ಜ್ಯೇಷ್ಠ ಪುತ್ರನಿಗೆ ಆಶೌಚವಿಲ್ಲದಿದ್ದರೆ ತಾಯಿ ತಂದೆಯರ ಪ್ರತಿ ಸಾಂವತ್ಸರಿಕ ಶ್ರಾದ್ಧವನ್ನು ಮಾಡಬಹುದೆಂದು ಅಭಿಪ್ರಾಯ ಪಡುತ್ತಾರೆ. ಇತರರು ಶಾರೀರಿಕ ನಿಯಮಗಳನ್ನು ಪರಿಪಾಲಿಸಿದರೆ ಸಾಕು ಎಂದು ಹೇಳುವವರಿದ್ದಾರೆ. ಇಲ್ಲಿಯ ಸಮಸ್ಯೆಯೂ ಅವಿಭಕ್ತ ಕುಟುಂಬದ ವಿಷಯವಾದ್ದರಿಂದ ಇದು ಹೀಗೆಯೇ ಎಂದು ಹೇಳುವಂತಿಲ್ಲ. (ದೇಶಾಚಾರದಂತೆ ನಡೆದುಕೊಳ್ಳಬೇಕು)

ವಿಭಕ್ತ ಕುಟುಂಬವಾಗಿದ್ದರೆ ಅವರವರ ಶುದ್ಧಿಯ ಪ್ರಕಾರ ಅವರವರ ಮನೆಯಲ್ಲಿ ಶ್ರಾದ್ಧವನ್ನು ಬೇರೆಬೇರೆಯಾಗಿ ಮಾಡಿಕೊಳ್ಳಬೇಕು. ಮುಖ್ಯಕರ್ತೃವಿಗೆ ಯಾವುದೇ ಆತಂಕವಿಲ್ಲದಿದ್ದರೆ ತಾಯಿತಂದೆಯರ ಮೃತಾಹಶ್ರಾದ್ಧವನ್ನು ವ್ಯತಿಕ್ರಮಿಸಬಾರದೆಂದೂ, ವ್ಯತಿಕ್ರಮಿಸಿದರೆ ಬಹುದೊಡ್ಡ ದೋಷವೆಂದು ಶಾಸ್ತ್ರದಲ್ಲಿ ನಿರೂಪಿಸಿದೆ.

ಆಶೌಚ ಬಂದದ್ದು ಗೊತ್ತಿಲ್ಲದೆ ಪಾಕಾದಿಗಳನ್ನು ಸಿದ್ಧಪಡಿಸಿದರೆ ಆಶೌಚ ತಿಳಿದ ನಂತರ ಆ ಪಾಕಾದಿಗಳನ್ನು ಆಶೌಚ ರಹಿತರು ಬಡಿಸಬಹುದು. ಬ್ರಾಹ್ಮಣರು ಆ ಪಾಕಾದಿಗಳನ್ನು ಊಟಮಾಡಬಹುದು. ಮೊದಲೇ ತಯಾರಿಸಿದ ಪಾಕಾದಿಗಳಿಗೆ ದೋಷವಿಲ್ಲವು. ಆಶೌಚ ತಿಳಿದ ನಂತರ ಆ ಪಾಕಾದಿಗಳನ್ನು ಆಶೌಚಿಗಳು ಮುಟ್ಟಬಾರದು.

ಪ್ರೇತಶ್ರಾದ್ಧವನ್ನು ಅಶುಚಿಯಾದರೂ ಹನ್ನೊಂದನೇ ದಿನ ಏಕೋದ್ದಿಷ್ಟದವರೆಗೆ ಬಿಡದೆ ಆಚರಿಸಬೇಕು. ಯಜಮಾನನು ಮಾಡಬೇಕಾದ ಶ್ರಾದ್ಧವು ತಾಯಿ ತಂದೆ ಮೊದಲಾದವರ ಆಶೌಚದಿಂದ ತಡೆದರೆ ಆಶೌಚ

ಶುದ್ಧಿಯಾಗುವ ದಿವಸ (ಹನ್ನೊಂದನೇ ದಿವಸವೆ) ಆ ತಡೆದ ಶ್ರಾದ್ಧವನ್ನು ಆಚರಿಸಬೇಕು. ಸಪಿಂಡೀಕರಣದವರೆಗೆ ಪ್ರೇತಶ್ರಾದ್ಧವೆನ್ನುವರು. ಸಪಿಂಡೀಕರಣ ಶ್ರಾದ್ಧವು ಪಾರ್ವಣೈಕೋದ್ದಿಷ್ಟವಾಗಿರುತ್ತದೆ. (ಪಿತೃಗಳು ಮತ್ತು ಪ್ರೇತ ಸಮ್ಮಿಶ್ರವಾಗಿರುತ್ತದೆ. ಸಪಿಂಡೀಕರಣದ ನಂತರ ಕೇವಲ ಪಿತೃಗಳ ಶ್ರಾದ್ಧವೆಂದು ತಿಳಿಯಬೇಕು.)

---

**ಬ್ರಾಹ್ಮೇ:**– ನಿಮಂತ್ರಿತೇಷು ವಿಪ್ರೇಷು ಪ್ರಾರಬ್ಧೇ ಶ್ರಾದ್ಧಕರ್ಮಣಿ ।
ಪಶ್ಚಾತ್ಪತಿತಮಾಶೌಚಂ ನ ಭವೇದಿತಿ ನಿಶ್ಚಯಃ ॥

**ವಿಷ್ಣುಃ:**– ವ್ರತಯಜ್ಞವಿವಾಹೇಷು ಶ್ರಾದ್ಧೇ ಹೋಮೇಽರ್ಚನೇ ಜಪೇ ।
ಪ್ರಾರಬ್ಧೇ ಸೂತಕಂ ನ ಸ್ಯಾತ್ ಅನಾರಬ್ಧೇ ತು ಸೂತಕಮ್ ॥

**ಶತಶ್ಲೋಕೀ:**–
ಶ್ರಾದ್ಧೋತ್ಸವಾದೌ (ಸರ್ವತ್ರ) ಭುಕ್ತ್ಯಂತಃ ಪಾಕಾದೌ ಚಾಘಸಂಭವೇ ।
ಪರೈರ್ದೇಯಂ ಚ ಭೋಕ್ತವ್ಯಂ ನ ದೋಷ ಇತಿ ನಿಶ್ಚಯಃ ॥

**ಸ್ಮೃತ್ಯಂತರೇ:**– ಮಾಸಿಕಾನ್ಯಾಬ್ದಿಕಂ ಪಿತ್ರೋಃ ಅಶುದ್ಧೋಽಪ್ಯೌರಸಃ ಸುತಃ ।
ಕುರ್ಯಾದೇವ ತಿಥಿಪ್ರಾಪ್ತಮ್ ಇತಿ ಶಾತಾತಪೋಽಬ್ರವೀತ್ ॥
(ಏತತ್ ಆರಬ್ಧವಿಷಯಃ)

**ಬ್ರಾಹ್ಮೇ:**– ನಿಮಂತ್ರಿತೇಷು ವಿಪ್ರೇಷು ಪ್ರಾರಬ್ಧೇ ಶ್ರಾದ್ಧಕರ್ಮಣಿ ।
ನಿಮಂತ್ರಿತಸ್ಯ ವಿಪ್ರಸ್ಯ ಸ್ವಾಧ್ಯಾಯನಿರತಸ್ಯ ಚ ॥
ದೇಹೇ (ಗೇಹೇ) ಪಿತೃಷು ತಿಷ್ಠತ್ಸು ನಾಶೌಚಂ ವಿದ್ಯತೇ ಕ್ವಚಿತ್ ॥

**ಸ್ಮೃತಿಸಂಗ್ರಹೇ:**–ಕಾರ್ಯೇ ಪ್ರತ್ಯಾಬ್ದಿಕೇ ಶ್ರಾದ್ಧೇ ತ್ವಂತರಾಮೃತಸೂತಕೇ ।
ಆಶೌಚಾನಂತರಂ ಕಾರ್ಯಂ ಇತಿ ವಾಸಿಷ್ಠಭಾಷಿತಮ್ ॥
(ತನ್ಮಾಸೀಂದುಕ್ಷಯೇಽಪಿ ವಾ) (ಅಮಾಯಾಮಿತ್ಯರ್ಥಃ ಏತತ್ ಅನಾರಬ್ಧವಿಷಯಕಮಿತಿ)

**ಗೋಭಿಲಃ:**– ದೇಯೇ ಪಿತೃಣಾಂ ಶ್ರಾದ್ಧಂ ತು ಹ್ಯಂತರಾ ಮೃತಸೂತಕೇ ।
ಆಶೌಚಾನಂತರಂ ಕಾರ್ಯಂ ತನ್ಮಾಸೀಂದುಕ್ಷಯೇಽಪಿ ವಾ ॥

**ಸ್ಮೃತಿಸಾರಸರ್ವಸ್ವೇ:**– ಇತಿ ವಾಸಿಷ್ಠಗೋಭಿಲಾದಿವಚನೈಃ (ಅನಾರಬ್ಧೇ) ಅಘೇ ಪ್ರಾಪ್ತೇ ಶ್ರಾದ್ಧಸ್ಯ ಅಘಾನಂತರಮೇವ ಕರ್ತವ್ಯತ್ವೇನ ವಿಧಾನಾತ್ ॥ಇತಿ॥

**ಸ್ಮೃತೌ:**– ಮೃತಾಹಂ ಸಮತಿಕ್ರಮ್ಯ ಚಾಂಡಾಲಾಃ ಕೋಟಿ ಜನ್ಮಸು ।
ಶ್ವಾನಯೋನಿಂ ಶತಂ ಭುಕ್ತ್ವಾ ಸತತಂ ನರಕಮಾಪ್ನುಯಾತ್ ॥

ಜಾಬಾಲಿಃ:- ಕರ್ಮಮಧ್ಯೇ ತು ಯಃ ಕಶ್ಚಿತ್ ಯದಿ ಸ್ಯಾದಶುಚಿರ್ನರಃ ।
ಸ್ನಾತ್ವಾ ಕರ್ಮ ಪುನಃ ಕುರ್ಯಾತ್ ಅನ್ಯಥಾ ವಿಫಲಂ ಭವೇತ್ ।

ವಿಜ್ಞಾನೇಶ್ವರಃ:- ಯಜ್ಞೇ ಸಂಭೃತಸಂಭಾರೇ ವಿವಾಹೇ ಶ್ರಾದ್ಧಕರ್ಮಣಿ ।
ತಥಾ ಚೌಲಾದಿ ಸಂಸ್ಕಾರೇ ಸದ್ಯಃ ಶೌಚಂ ವಿಧೀಯತೇ ।
(ಏತತ್ ಆರಬ್ಧವಿಷಯಕಮಿತಿ ಅನುಸಂಧೇಯಮಿತಿ)

## ೬. ಸಪಿಂಡೀಕರಣ ಕರ್ತೃ ವಿಚಾರ

ತಾಯಿತಂದೆಯರ ಸಪಿಂಡೀಕರಣ ಶ್ರಾದ್ಧವನ್ನು ಅವರ ಔರಸಪುತ್ರರೇ ನಡೆಸಬೇಕು. ನಾಲ್ಕಾರು ಜನ ಮಕ್ಕಳಿದ್ದರೆ ಅವರೊಳಗೆ ಯಾವವನು ಜ್ಯೇಷ್ಠನೋ (ಎಲ್ಲರಿಗೂ ಅಣ್ಣನೋ) ಅವನೇ ಸಪಿಂಡೀಕರಣ ಶ್ರಾದ್ಧವನ್ನು ಮಾಡಬೇಕು. ಬಹಳ ಜನ ಮಕ್ಕಳಿದ್ದರೆ ತಾಯಿ ತಂದೆಯರ ಔರ್ಧ್ವದೇಹಿಕ ಸಂಸ್ಕಾರವನ್ನು ಎಲ್ಲರೂ ಕೂಡಿಕೊಂಡು ಒಂದೇ ಕಡೆಗೆ ನಡೆಸಬೇಕು. ಬೇರೆ ಬೇರೆ ಮಾಡಬಾರದು. ದಹನದಿಂದ (ಒಂದು ವರ್ಷದವರೆಗೂ) ಪುರುಷಾರ್ಥ ಚಿಂತಾಮಣಿಯಲ್ಲಿ ಋದ್ಧಿ ಕಾಮನೆಯುಳ್ಳ ತಮ್ಮಂದಿರು ಬೇರೆ ಮಾಡಬಹುದು ಎಂಬ ವಚನವು ಸರ್ವಥಾ ಜ್ಯೇಷ್ಠಪುತ್ರರು ಸಿಗದಿದ್ದರೆ ಅಥವಾ ಮಂಗಳ ಕಾರ್ಯದ ಒತ್ತಡದಲ್ಲಿ ಅಥವಾ ಅತ್ಯಾಪತ್ತಿಯಲ್ಲಿ ಎಂದು ತಿಳಿಯಬೇಕು. ಯಾಕೆಂದರೆ ಬಹುಸ್ಮೃತಿಗಳಲ್ಲಿ ಜ್ಯೇಷ್ಠಪುತ್ರನೇ ಮುಖ್ಯ ಅಧಿಕಾರಿಯೆಂದು ಪ್ರತಿಪಾದಿಸಿದೆ.

ಸಜಾತೀಯ ಕ್ರಮಬದ್ಧ ವಿವಾಹವಾಗಿರುವ ಅನೇಕ ಪತ್ನಿಯರಲ್ಲಿ ಅನೇಕ ಮಕ್ಕಳಿದ್ದರೆ ಅವರೊಳಗೆ ಯಾವನು ಜ್ಯೇಷ್ಠಪುತ್ರನೋ ಎಲ್ಲರಿಗೂ ಅಣ್ಣನೋ ಅವನು ಆ ತಂದೆಯ ಸಪಿಂಡೀಕರಣವನ್ನು ನಡೆಸಬೇಕು. ಮಾತೃತಃ ಜ್ಯೇಷ್ಠತ್ವ ವಿಚಾರವನ್ನು ದಾಕ್ಷಿಣಾತ್ಯರು ಒಪ್ಪುವುದಿಲ್ಲ. ಕೆಲವು ನಿಬಂಧಗಳಲ್ಲಿ ಮಾತೃಜ್ಯೇಷ್ಠರು ಸಪಿಂಡೀಕರಣವನ್ನು ಮಾಡಬಹುದು ಎಂಬ ವಿಷಯವು ದೇಶವ್ಯವಸ್ಥೆ ಮತ್ತು ವರ್ಣಭೇದ ವ್ಯವಸ್ಥೆಯೆಂದು ತಿಳಿಯಬೇಕು.

ಕ್ಷತ್ರಿಯರಲ್ಲಿ ಜ್ಯೇಷ್ಠ ಪುತ್ರನ ಬಗ್ಗೆ ತುಂಬಾ ಕೋಲಾಹಲವಿದೆ. ಪತಿಯೊಡನೆ ಪಟ್ಟಾಭಿಷೇಕ ಸ್ವೀಕರಿಸಿದವಳು ಮಹಿಷಿ ಎಂಬುದರಿಂದ ಸಿಂಹಾಸನದ ಅಧಿಕಾರಿ ಮತ್ತು ಧರ್ಮಕರ್ಮಗಳ ಅಧಿಕಾರವು ಜ್ಯೇಷ್ಠ ಪತ್ನೀ ಮಗ ಸಣ್ಣವನಿದ್ದರೂ ಅವನಿಗೆ ಸೇರಬೇಕೆಂಬ ಆಶಯವೂ ಇದೆ. ಅದರಿಂದ ಕ್ಷತ್ರಿಯರಲ್ಲಿ ಯಾವಳನ್ನು ಮೊದಲು (ಪ್ರಪ್ರಥಮ) ವಿವಾಹವಾದನೋ ಅವಳೇ ಧರ್ಮಪತ್ನಿ ಎಂದು ಅವಳಲ್ಲಿ ಹುಟ್ಟಿದ ಮಗನು ಧರ್ಮಪುತ್ರನೆಂದು ವಿವರಿಸಲಾಗಿದೆ. ಬ್ರಾಹ್ಮವರ್ಣದಲ್ಲಿ ಸಜಾತೀಯ ಕನ್ನಿಕೆಯನ್ನು ಧರ್ಮತಃ ವಿವಾಹವಾದರೆ ಅವಳು ಧರ್ಮಪತ್ನಿಯೇ ಆಗುವಳು. ಅವಳಿಗೂ ಪತಿಯೊಂದಿಗೆ ಧರ್ಮಕರ್ಮಗಳಲ್ಲಿ ಸಹ ಅಧಿಕಾರವಿದೆಯೆಂದು ತಿಳಿಯಬೇಕು. ಮನುಸ್ಮೃತಿಯಲ್ಲಿ ಧಾರ್ಮಿಕ

ವಿಧಿವಿಧಾನಗಳಿಗೆ ಸಂಬಂಧಪಟ್ಟಂತೆ ಮಾತೃಜ್ಯೇಷ್ಠ ಪುತ್ರನನ್ನು ಸ್ಪಷ್ಟವಾಕ್ಯದಿಂದ (ಏನೂ ಸಂಶಯವಿಲ್ಲದಂತೆ) ನಿರಾಕರಿಸಲಾಗಿದೆ. ಮಾತ್ರವಲ್ಲ ಶ್ರೌತಕ್ರಮಗಳನ್ನು ಸೂಚಿಸಿ ಜನ್ಮಜ್ಯೇಷ್ಠನೇ ತಂದೆಯ ಸಪಿಂಡೀಕರಣಕ್ಕೆ ಯೋಗ್ಯ (ಅರ್ಹ) ಅಧಿಕಾರಿಯೆಂದು ತೋರಿಸಲಾಗಿದೆ. ಮಹಾಗರುಡ ಪುರಾಣದಲ್ಲಿ ಸಪಿಂಡೀಕರಣ ಕರ್ತೃಗಳನ್ನು ಅನೇಕಾನೇಕ ವಿಧವಾಗಿ ವಿಶ್ಲೇಷಿಸಿ ಕೊನೆಗೆ (ತಸ್ಮಾತ್) ಆದ್ದರಿಂದ ಜ್ಯೇಷ್ಠ ಪುತ್ರನು ಅತಿಭಕ್ತಿಯಿಂದ ತಾಯಿತಂದೆಯರ (ದಶಗಾತ್ರ ನಿಧಿ) ಔರ್ಧ್ವದೇಹಿಕ ಸಂಸ್ಕಾರಗಳನ್ನು ಆಚರಿಸಬೇಕೆಂದು ವಿವರಿಸಿದೆ. ಹಿಂದೆ ವಿವೇಚಿಸಿರುವುದನ್ನು ಗಮನದಲ್ಲಿಟ್ಟುಕೊಂಡು "ತಸ್ಮಾತ್" ಆದ ಕಾರಣ ಎಂಬ ಪದಪ್ರಯೋಗವಿದೆಯೆಂದೂ ತಿಳಿಯಬೇಕು. ಮನುಸ್ಮೃತಿಯಲ್ಲಿ ಯಾವ ಪುತ್ರನ ಮುಖನೋಡುವ ಮಾತ್ರದಿಂದ ಪಿತೃಋಣವು ಪರಿಹಾರವಾಗುವುದೋ ಯಾವ ಪುತ್ರನಿಂದ ಅನಂತ ಸುಖ ಪ್ರಾಪ್ತವಾಗುವುದೋ ಅವನೇ ಧರ್ಮಪುತ್ರನೆಂದು ಎಲ್ಲಾ ಧಾರ್ಮಿಕ ವಿಧಿಗಳಿಗೆ ಅರ್ಹನೆಂದು ಸ್ಪಷ್ಟವಾಗಿ ತಿಳಿಸಿದೆ. ಎಷ್ಟೋ ಸ್ಮೃತಿಗಳಲ್ಲಿ ಕನಿಷ್ಠರು ಸಪಿಂಡೀಕರಣವನ್ನು ನಡೆಸಿದರೆ ಪ್ರೇತತ್ವದ ನಿರ್ವತ್ತಿಯೇ ಇಲ್ಲವೆಂದೂ ಹೇಳಿ ಜ್ಯೇಷ್ಠನೇ ಮುಖ್ಯ ಅಧಿಕಾರಿಯೆಂದು ಘೋಷಿಸಿವೆ. ಜ್ಯೇಷ್ಠನ ಅಸನ್ನಿಧಾನದಲ್ಲಿ ಕನಿಷ್ಠರು ಸಪಿಂಡೀಕರಣವನ್ನು ಮಾಡಿದರೂ ಜ್ಯೇಷ್ಠನು ಪುನಃ ಸಪಿಂಡೀಕರಣವನ್ನು ಆಚರಿಸಬೇಕು ಎಂಬ ವಿಧಿವಾಕ್ಯವನ್ನು ವಿಚಾರಿಸಿದರೆ ಜ್ಯೇಷ್ಠ ಪುತ್ರನಿಗೆ ಇರುವ ಅರ್ಹತೆ ಗೊತ್ತಾಗುತ್ತದೆ.

ತಾಯಿತಂದೆಯರ ಸಪಿಂಡೀಕರಣಕ್ಕೆ ಎರಡು ರೀತಿಯ ಅರ್ಹತೆಯನ್ನು ಹೇಳಿರುವರು. ಒಂದು ಜ್ಯೇಷ್ಠಪುತ್ರನಾಗಿರಬೇಕು. ಎರಡನೇಯದು ಔರಸ ಪುತ್ರನಾಗಿರಬೇಕು. ಔರಸಪುತ್ರನೆಂದರೆ ಯಾರು? ಬ್ರಾಹ್ಮಣನೂ, ಬ್ರಾಹ್ಮಣವರ್ಣದ ಕನ್ನಿಕೆಯನ್ನು ಬ್ರಾಹ್ಮ ವಿವಾಹವಿಧಿಯಿಂದ ವಿವಾಹವಾಗಿ ಅವಳಲ್ಲಿ ಪಡೆದಿರುವ ಪುತ್ರನು ಔರಸಪುತ್ರನೆಂದು ಹೇಳಿದೆ. ಸಜಾತೀಯ ಪುರುಷನು ಸಜಾತೀಯ ಕನ್ನಿಕೆಯನ್ನು ಸಜಾತೀಯ ಧರ್ಮದಂತೆ ವಿವಾಹವಾಗಿ ಅವಳಲ್ಲಿ ಹುಟ್ಟಿದ ಮಗನು ಔರಸಪುತ್ರನಾಗುವನು ಎಂದು ಹೇಳಿದೆ. ಆದ ಕಾರಣ ಔರಸಪುತ್ರನೂ ಜನ್ಮಜ್ಯೇಷ್ಠನೂ ಆದ ಹಿರಿಯ ಮಗನೇ (ಎಲ್ಲರಿಗೂ ಅಣ್ಣನೇ) ತಾಯಿತಂದೆಯರ ಸಪಿಂಡೀಕರಣ ಶ್ರಾದ್ಧದಲ್ಲಿ ಮುಖ್ಯ ಅಧಿಕಾರಿಯಾಗುವನು. ಉಳಿದವರು ಅನುಕರ್ತೃಗಳಾಗಿ ತಮ್ಮ ಸೇವೆಯನ್ನು ಸಲ್ಲಿಸಬೇಕು. (ಇದು ಸರಿಯಾದ ವ್ಯವಸ್ಥೆ)

ಅಪುತ್ರವಂತರಿಗೆ ಹೆಂಡತಿ (ಮೃತನ ಪತ್ನಿ) ಅಣ್ಣತಮ್ಮಂದಿರು, ಅವರ ಮಕ್ಕಳು, ಮಗನ ಮಗನು (ದೌಹಿತ್ರನು), ಪಿತೃವ್ಯಪುತ್ರರು, ಏಳು ತಲೆಮಾರಿನ ಸಪಿಂಡಜನರು ಹೀಗೆ ಅನೇಕ ಅಧಿಕಾರಿಗಳನ್ನು ಸೂಚಿಸಿರುವರು. ಪುತ್ರ ಪೌತ್ರ ಪ್ರಪೌತ್ರ, ದುಹಿತೃ ಪುತ್ರ (ದೌಹಿತ್ರ), ಅಣ್ಣತಮ್ಮಂದಿರು, ಅವರ ಮಕ್ಕಳು, ಪಿತೃವ್ಯ (ದೊಡ್ಡಪ್ಪ, ಚಿಕ್ಕಪ್ಪ), ಇವರ ಮಕ್ಕಳು, ಸಪಿಂಡದ ಜನರು, ಶಿಷ್ಯರು, ಮಿತ್ರರು, ಪುರೋಹಿತರು ಹೀಗೊಂದು ಅಧಿಕಾರಿಗಳ ಪಟ್ಟಿಯೂ ಇದೆ. ಅನಾಥ

ಜನರ ಪ್ರೇತ ಸಂಸ್ಕಾರವನ್ನು ನಡೆಸಿದರೆ ಕೋಟಿ ಯಜ್ಞದ ಫಲವನ್ನು ಹೇಳಿರುವರು. ಯಾವನೊಬ್ಬನೂ ಸಜಾತೀಯ ಪ್ರೇತಸಂಸ್ಕಾರವನ್ನು ತನಗೆ ಸರಿಯೆಂದು ಕಂಡರೆ ಭಕ್ತಿ ಶ್ರದ್ಧೆಯಿಂದ ಅವನು ನಿರ್ವರ್ತಿಸಬಹುದೆಂದು ಸೂಚಿಸಿರುವರು. ಇಲ್ಲಿ ಯಾರಿಗೆ ಯಾರು ಔರ್ಧ್ವದೈಹಿಕ ಸಂಸ್ಕಾರವನ್ನು ಮಾಡಬೇಕು ಎಂಬುದಕ್ಕಿಂತಲೂ ಪ್ರೇತತ್ವ ನಿವರ್ತಕ ಸಂಸ್ಕಾರವನ್ನು ನಡೆಸುವದೇ ಹೆಚ್ಚು ಶ್ರೇಷ್ಠ, ಹೆಚ್ಚು ಅವಶ್ಯಕತೆಯಾಗಿದೆ ಎಂದು ತಾತ್ಪರ್ಯವಾಗಿದೆ. ಹಾಗೆಂತ ಅವರವರ ಸಮೀಪದ (ರಕ್ತ) ಅವಯವ ಸಂಬಂಧಿಗಳು ಯೋಗ್ಯ ಅರ್ಹ ಅಧಿಕಾರಿಗಳು ಎಂಬುದರಲ್ಲಿ ಎರಡು ಮಾತಿಲ್ಲ. ಅನೇಕ ಜನರಿಗೆ ಸಪಿಂಡೀಕರಣದ ಅಧಿಕಾರವಿದೆಯೆಂದು ಪ್ರತಿಪಾದನೆ ಮಾಡಿದರೂ ಸಹ ಪೂರ್ವಪೂರ್ವದ ಜನರ ಅಭಾವದಲ್ಲಿ ಮಾತ್ರ ಉತ್ತರೋತ್ತರದಲ್ಲಿ ಹೇಳಿದ ಜನರಿಗೆ ಅಧಿಕಾರ ಬರುತ್ತದೆ ಎಂದು ತಿಳಿಯಬೇಕು. ಮಗನಿದ್ದರೆ ಅವನೇ ಸಪಿಂಡೀಕರಣವನ್ನು ಮಾಡಬೇಕು. ಬೇರೆಯವರಿಗೆ ಅಧಿಕಾರವು ಬರುವುದಿಲ್ಲವೆಂದು ತಾತ್ಪರ್ಯವಾಗಿದೆ.

ಮಕ್ಕಳಿಲ್ಲದ ದಂಪತಿಗಳೊಳಗೆ ಪತಿಯು ಮೃತಪಟ್ಟರೆ ಸ್ವತಃ ಅವನ ಧರ್ಮಪತ್ನಿಯು ಸಂಸ್ಕಾರವನ್ನು ನಡೆಸಬಹುದು. ಆದರೆ ದಹನವಿಧಿಯನ್ನು ಮಾತ್ರ ಮಂತ್ರವತ್ತಾಗಿ ನಡೆಸಿ ಉಳಿದ ಕರ್ಮಗಳನ್ನು ಪೌರಾಣಮಂತ್ರದಿಂದ ನಡೆಸಬೇಕು. ಅಥವಾ ಯೋಗ್ಯ ಪ್ರತಿನಿಧಿಯಿಂದ ಮಂತ್ರವತ್ತಾಗಿ ನಡೆಸಬೇಕು. (ಸ್ತ್ರೀಯರಿಗೂ ಶೂದ್ರರಿಗೂ ವೇದೋಕ್ತ ಕರ್ಮಗಳಲ್ಲಿ ಅಧಿಕಾರವಿಲ್ಲವೆಂಬುದನ್ನು ಮರೆತುಕೊಳ್ಳಬಾರದು.)

ಹೆಂಡತಿ ಮೃತಪಟ್ಟರೆ ಪತಿಯು ಸಂಸ್ಕಾರವನ್ನು ನಡೆಸಬಹುದು ಅಥವಾ ಬೇರೆ ಅಧಿಕಾರಿಗಳಿಂದ ಮಾಡಿಸಿದರೂ ದೋಷವಿಲ್ಲ ಪುತ್ರರಿಲ್ಲದ ಪಿತೃವ್ಯ (ದೊಡ್ಡಪ್ಪ, ಚಿಕ್ಕಪ್ಪ) ದಂಪತಿಗಳ ಸಂಸ್ಕಾರವನ್ನು ಅವರ ಅಣ್ಣತಮ್ಮಂದಿರ ಮಕ್ಕಳ (ಜೀವತ್ಪಿತೃಕರಾದರೂ) ಮಾಡಲು ಅಡ್ಡಿಯಿಲ್ಲ. ಯಾಕೆಂದರೆ ಮನುಸ್ಮೃತಿಯ ವಾಕ್ಯವನ್ನಾಧರಿಸಿ ದತ್ತಮೀಮಾಂಸಾ ಮತ್ತು ದತ್ತಚಂದ್ರಿಕೆಯಲ್ಲಿ ಅಪುತ್ರ ಪಿತೃವ್ಯ ದಂಪತಿಗಳಿಗೆ ಅಣ್ಣತಮ್ಮಂದಿರ ಮಕ್ಕಳೇ ಔರಸ ಪುತ್ರ ಪ್ರತಿನಿಧಿಗಳೆಂದು. ದತ್ತು ಸ್ವೀಕೃತಿಯ ಅವಶ್ಯಕತೆ ಇಲ್ಲವೆಂದು, ಒಂದೊಮ್ಮೆ ದತ್ತು ಸ್ವೀಕರಿಸುವುದಾದರೆ ಅಣ್ಣತಮ್ಮಂದಿರ ಮಕ್ಕಳನ್ನೇ ಸ್ವೀಕರಿಸಬೇಕೆಂದು ಅಣ್ಣತಮ್ಮಂದಿರಿಗೆ ಮಕ್ಕಳಿದ್ದರೆ ಇವರು, ಅಪುತ್ರವಂತರಲ್ಲವೆಂದು ಆ ಮಕ್ಕಳೇ ಇವರಿಗೂ ಮಕ್ಕಳೆಂದು ಹೇಳಿದೆ. ಆದ್ದರಿಂದ ಅಪುತ್ರಪಿತೃವ್ಯ ದಂಪತಿಗಳ ಅಪರಸಂಸ್ಕಾರಗಳನ್ನು ಅಣ್ಣತಮ್ಮಂದಿರ ಮಕ್ಕಳು ಅಪುತ್ರ ಮಾತಾಮಹ ದಂಪತಿಗಳ ಅಪರ ಸಂಸ್ಕಾರವನ್ನು ಮಗಳ ಮಗನು (ದೌಹಿತ್ರರು) ಜೀವತ್ಪಿತೃಕನಾದರೂ ನಡೆಸಿದರೆ ದೋಷವಿಲ್ಲವೆಂದು ಪ್ರತಿಪಾದಿಸಿದೆ. ಈ ವಿಷಯದಲ್ಲಿ ದಾಕ್ಷಿಣಾತ್ಯ ಹಿರಿಯ ವಿದ್ವಾಂಸರ ಅಭಿಪ್ರಾಯವೂ ಇದೆಯೆಂದು ತಿಳಿಯಬೇಕು. ದತ್ತ ಪುತ್ರನ ಸ್ವೀಕೃತಿಯ ನಂತರ ಮಕ್ಕಳಾದರೆ ಆ ಮಕ್ಕಳೇ ತಾಯಿ ತಂದೆಯರ ಔರ್ಧ್ವದೈಹಿಕ ಸಂಸ್ಕಾರಗಳನ್ನು ನಡೆಸಬೇಕು.

ಅಪುತ್ರಮಾತಾಮಹ ದಂಪತಿಗಳ ಸಂಸ್ಕಾರವನ್ನು ಮಗಳಮಗ (ದೌಹಿತ್ರ) ಜೀವತ್‌ಪಿತೃಕನಾದರೂ ಮಾಡಬಹುದು. ಈ ನಿರ್ಣಯವು ಕೇವಲ ಪಿತೃವ್ಯ ದಂಪತಿಗಳಿಗೆ ಮತ್ತು ಅಪುತ್ರ ಮಾತಾಮಹ ದಂಪತಿಗಳಿಗೆ ಮಾತ್ರ ಸೀಮಿತವಾಗಿದೆಯೆಂದು ತಿಳಿಯಬೇಕು. ಜೀವತ್ ಪಿತೃಕನು ಕಂಡಕಂಡವರ ಪ್ರೇತ ಸಂಸ್ಕಾರ ನಡೆಸಿದರೆ, ಪ್ರಾಯಶ್ಚಿತ್ತಕ್ಕೆ ಗುರಿಯಾಗುವನು. ಜೀವತ್‌ಪಿತೃಕನು ಈ ವಿಷಯದಲ್ಲಿ ಎಚ್ಚರವಹಿಸಬೇಕು.

ಜೀವತ್‌ಪಿತೃಕನು ತನ್ನ ತಾಯಿಯ, ಪುತ್ರರಿಲ್ಲದ ಸಪತ್ನಿ ತಾಯಿಯ, ಮಗ ಮತ್ತು ಸಪತ್ನಿಮಗನೂ ಇಲ್ಲದ ಹೆಂಡತಿಯ, ಅಪುತ್ರ ಪಿತೃವ್ಯ ದಂಪತಿಗಳ ಅಪುತ್ರ ಮಾತಾಮಹ ದಂಪತಿಗಳ ಹೀಗೆ ನಾಲ್ಕು ಗುಂಪುಗಳ ಜನರ ದಹನಾದಿ ಪ್ರೇತ ಸಂಸ್ಕಾರಗಳನ್ನು ನಡೆಸಬಹುದೆಂದು ಗೋಕರ್ಣದವರು ಪ್ರಕಾಶಪಡಿಸಿದ ಬೋಧಾಯನೀಯ ಬ್ರಹ್ಮಕರ್ಮಸಮುಚ್ಚಯದ ಪಿತೃಮೇಧ ಕಾಂಡದಲ್ಲಿ ಹೇಳಿದೆ. ಮಗಳನ್ನು ವಿವಾಹ ಮಾಡುವಾಗ ಇವಳಲ್ಲಿ ಹುಟ್ಟಿದ ಮಗನೇ ನನಗೆ ಪಿಂಡಪ್ರದಾನ ಮಾಡಲಿ ಎಂದು ಸಂಕಲ್ಪಿಸಿ ಕನ್ಯಾದಾನ ಮಾಡಿದರೆ ಆ ಮಗಳ ಮಗನೇ ಅಂದರೆ ದೌಹಿತ್ರನೇ ಮಾತಾಮಹ ದಂಪತಿಗಳ ಅಪರಸಂಸ್ಕಾರಗಳನ್ನು ನಡೆಸಬೇಕು.

ಜ್ಯೇಷ್ಠಪುತ್ರನು ಬ್ರಹ್ಮಚಾರಿಯಾಗಿದ್ದರೆ ಅಥವಾ ರೋಗಪೀಡಿತನಾಗಿದ್ದರೆ, ಮೂರ್ಖನಾದರೆ, ಪಾತಿತ್ಯಾದಿ ದೋಷಯುಕ್ತನಾಗಿದ್ದರೆ, ಸನ್ಯಾಸಿಯಾದರೆ ಈ ರೀತಿಯ ಪ್ರಸಂಗಗಳಲ್ಲಿ ಜ್ಯೇಷ್ಠಾನುಜನು (ಅಂದರೆ ಎರಡನೇ ಪುತ್ರನು) ತಾಯಿ ತಂದೆಯರ ಸಪಿಂಡೀಕರಣವನ್ನು ನಡೆಸಬೇಕೆಂದು ಹೇಳಿದೆ.

ಧರ್ಮಸಿಂಧುವಿನಲ್ಲಿ ಜ್ಯೇಷ್ಠ ಅಥವಾ ಕನಿಷ್ಠ ಎಂಬ ಶಬ್ದವನ್ನು ಅಣ್ಣ ಅಥವಾ ಅವನ ತಮ್ಮನೆಂದು ಪರಿಗ್ರಹಿಸಬೇಕು. ಎಲ್ಲರಿಗೂ ಕಿರಿಯನು ಕನಿಷ್ಠ ಎಂಬುದನ್ನು ಇಲ್ಲಿ ಪರಿಗ್ರಹಿಸುವಂತಿಲ್ಲವೆಂದೂ ತಿಳಿಸಿದೆ. ಶ್ರಾದ್ಧಾದಿಗಳಲ್ಲಿ ಬ್ರಾಹ್ಮಣಪ್ರದಕ್ಷಿಣೆ ಮಾಡುವಾಗ ಮತ್ತು ದಹನವಿಧಿಯಲ್ಲಿ ಎಲ್ಲರಿಗೂ ಚಿಕ್ಕವ (ಕನಿಷ್ಠಪುತ್ರ) ನಿಂದ ಕ್ರಮವಾಗಿ ಅಣ್ಣನವರೆಗೆ ಸಾಲುಕಟ್ಟಿ ಕರ್ಮಗಳನ್ನು ಆಚರಿಸುವುದು ಅಲ್ಲಿಯ ಶಾಸ್ತ್ರವಿಧಿ ಮತ್ತು ಶಿಷ್ಟರ ಆಚಾರವೂ ಆಗಿದೆಯೆಂದು ತಿಳಿಯಬಹುದು. ಜ್ಯೇಷ್ಠಪುತ್ರನಿಗೆ ಶ್ರೌತ ಅಥವಾ ಸ್ಮಾರ್ತ ಅಗ್ನಿಯು ಇಲ್ಲದಿದ್ದರೆ ಅಗ್ನಿ ಇರುವ ತಮ್ಮಂದಿರು ಸಪಿಂಡೀಕರಣ ಶ್ರಾದ್ಧವನ್ನು ಆಚರಿಸಬೇಕು. ಯಾರೊಬ್ಬನಿಗೂ ಅಗ್ನಿ ಇಲ್ಲದಿದ್ದರೆ ಜ್ಯೇಷ್ಠ ಪುತ್ರನೇ ಲೌಕಿಕಾಗ್ನಿಯಲ್ಲಿ ಸಪಿಂಡೀಕರಣವನ್ನು ಮುಗಿಸಬೇಕು. ಒಮ್ಮೆ ಜ್ಯೇಷ್ಠ ಪುತ್ರನು ಮೃತನಾದರೆ ತಂದೆಯು ಅತಿ ಸ್ನೇಹವಿರುವ ಕಾರಣ ಜ್ಯೇಷ್ಠ ಪುತ್ರನ ಔರ್ಧ್ವದೇಹಿಕ ಸಂಸ್ಕಾರವನ್ನು ಮಾಡುವುದು ಸರಿಯಲ್ಲವು. ಪಿಂಡಕೊಡುವ ಅಧಿಕಾರಿಗಳು ಯಾರೂ ಇಲ್ಲದಿದ್ದರೆ ಮಿತ್ರನು ಪಿಂಡಪ್ರದಾನ ಮಾಡಬಹುದು. ಯಾರೂ ಇಲ್ಲದಿದ್ದರೆ ಪುರೋಹಿತರು ಶಿಷ್ಯನ ಔರ್ಧ್ವದೇಹಿಕ ಸಂಸ್ಕಾರವನ್ನು ನಡೆಸಬೇಕು. ಅನಾಥ ಪ್ರೇತ ಸಂಸ್ಕಾರ

ನಡೆಸುವದರಿಂದ ಕೋಟಿ ಯಜ್ಞದ ಫಲವು ಪ್ರಾಪ್ತವಾಗುವುದು ಎಂದು ಹೇಳಿದೆ. ಯಾರ ಕರ್ಮವನ್ನು ಯಾರು ಮಾಡಬೇಕು ಎಂಬುದಕ್ಕಿಂತಲೂ ಪ್ರೇತತ್ವ ನಿವರ್ತಕ ಸಂಸ್ಕಾರವನ್ನು ನಡೆಸುವದೇ ಮುಖ್ಯವೆಂದು ತಾತ್ಪರ್ಯವಾಗಿದೆ. ಹಾಗಂತ ಅವರವರ ಸಮೀಪದ ಸಂಬಂಧಪಟ್ಟ ಜನರು ಮುಖ್ಯ ಅಧಿಕಾರಿಗಳು ಎಂಬ ವಿಷಯದಲ್ಲಿ ಎರಡು ಮಾತಿಲ್ಲ. ಪುತ್ರನೂ ಪೌತ್ರನೂ ಪ್ರಪೌತ್ರನೂ ಅಣ್ಣತಮ್ಮಂದಿರೂ ಅಣ್ಣತಮ್ಮಂದಿರ ಮಕ್ಕಳೂ ಸಪ್ತಪುರುಷ ಸಪಿಂಡರೂ ಇವರೆಲ್ಲರೂ ಮೃತರ ಸಂಸ್ಕಾರಗಳಿಗೆ ಅರ್ಹರು. ಆದರೆ ಮೊದಲು ಮೊದಲನೆಯವರ ಅಭಾವದಲ್ಲಿ ಮುಂದಿನವರಿಗೆ ಅಧಿಕಾರವು ಬರುತ್ತದೆ. ಅಂದರೆ (ಮಗನ ಅಭಾವದಲ್ಲಿ ಮೊಮ್ಮಗ ) ಮಗ, ಮೊಮ್ಮಗ ಇವರಿಬ್ಬರೂ ಇಲ್ಲದಿದ್ದರೆ ಮುಂದಿನ ಮಿಮ್ಮಗನಿಗೆ ಅಧಿಕಾರ ಬರುವುದು ಎಂದು ತಿಳಿಯಬೇಕು. ಹೀಗೆ ಪೂರ್ವ ಪೂರ್ವದ ಜನರ ಅಭಾವಪಕ್ಷದಲ್ಲಿ ಉತ್ತರೋತ್ತರದ ಜನರಿಗೆ ಅಧಿಕಾರವು ಬರುತ್ತದೆ. ಹಿಂದೆ ಹೇಳಿದ ಜನರ ಅಭಾವದಲ್ಲಿ ಧರ್ಮಪತ್ನಿ, ಹೆಣ್ಣುಮಕ್ಕಳು, ಸೊಸೆಯಂದಿರು ಅಧಿಕಾರಿಗಳು ಆಗುವರು. ಸ್ತ್ರೀಕರ್ತೃಕ ಸಂಸ್ಕಾರದಲ್ಲಿ ಅವರಿಗೆ ಇರುವ ಅರ್ಹತೆಯಂತೆ ಮಾಡಿಸುವುದು ಒಳ್ಳೆಯದು ಎಂದು ವಿನಂತಿ.

---

**ಗಾಲವಃ:–** ನಾಸಪಿಂಡೀಕೃತೇ ಪ್ರೇತೇ ಪಿತೃಕಾರ್ಯಂ ಪ್ರವರ್ತತೇ ।
ಸಪಿಂಡೀಕರಣಂ ಕೃತ್ವಾ ಕುರ್ಯಾತ್ಪಿತ್ರ್ಯಂ ಶುಭಾನಿ ಚ ॥

**ಗಾರುಡೇ:–** ಬಹವೋಽಪಿ ಯದಾ ಪುತ್ರಾಃ ವಿಧಿಂ ಏಕಃ ಸಮಾಚರೇತ್ ।
ದಶಗಾತ್ರಂ ಸಪಿಂಡತ್ವಂ ಶ್ರಾದ್ಧಾನ್ಯನ್ಯಾನಿ ಷೋಡಶ ॥

**ವಿಜ್ಞಾನೇಶ್ವರಃ:–** ನವಶ್ರಾದ್ಧಂ ಸಪಿಂಡತ್ವಂ ಶ್ರಾದ್ಧಾನ್ಯಪಿ ಚ ಷೋಡಶ ।
ಏಕೇನೈವ ತು ಕಾರ್ಯಾಣಿ ಸಂವಿಭಕ್ತಧನೇಷ್ವಪಿ ॥
ಏತಚ್ಚ ಸಪಿಂಡೀಕರಣಂ ಜ್ಯೇಷ್ಠೇನೈವ ಕಾರ್ಯಮ್ ॥

**ಮರೀಚಿಃ:–** ಸರ್ವೈರನುಮತಿಂ ಕೃತ್ವಾ ಜ್ಯೇಷ್ಠೇನೈವ ತು ಯತ್ಕೃತಮ್ ।
ದ್ರವ್ಯೇಣ ಚ ವಿಭಕ್ತೇನ ಸರ್ವೈರೇವ ಕೃತಂ ಭವೇತ್ ॥

ಜ್ಯೇಷ್ಠಪುತ್ರಸ್ತು ದೂರಸ್ಥೇ ಕನಿಷ್ಠಾದ್ಯಾಃ ಯಥೋದಿತಮ್ ।
ಕುರ್ಯುಃ ಪಿತ್ರೋಸ್ತು ಸಂಸ್ಕಾರಂ ಸಪಿಂಡೀಕರಣಂ ನತು ॥
ಇತಿ ಜ್ಯೇಷ್ಠಸ್ಯೈವ ಸಪಿಂಡೀಕರಣಾಧಿಕಾರಸ್ಮರಣಾಚ್ಚ ॥
ಜ್ಯೇಷ್ಠಸದ್ಭಾವೇ ಕನಿಷ್ಠ ಕೃತೇ ತು ಪ್ರೇತತ್ವವಿಮೋಚನಂ ನಾಸ್ತ್ಯೇವ ॥

**ಸ್ಮೃತಿಸಾರಸರ್ವಸ್ವೇ:–** ಜ್ಯೇಷ್ಠಪುತ್ರಸ್ಯ ಸದ್ಭಾವೇ ಕನಿಷ್ಠಃ ಕುರುತೇ ಕ್ರಿಯಾಮ್ ।
ಪ್ರೇತತ್ವಾನ್ನ ವಿಮುಚ್ಯೇತ ಪಿತೃತ್ವಂ ಚ ನ ಗಚ್ಛತಿ ॥

**ವಿಜ್ಞಾನೇಶ್ವರಃ:-** ಸಪಿಂಡೀಕರಣಂ ಪಿತ್ರೋಃ ನ ಕಾರ್ಯಮಖಿಲೈಃ ಸುತೈಃ ।
ಏಕೇನಾಪಿ ಕೃತೇ ಸಮ್ಯಕ್ ಪುತ್ರತ್ವಗುಣಸಂಭವಾತ್ ॥
ಇತ್ಯಾದಿಷು ಏಕಶಬ್ದಸ್ಯ ಜ್ಯೇಷ್ಠಪರತ್ವಂ ವ್ಯಾಖ್ಯೇಯಮ್ ।
ತಸ್ಯೈವ ಪುತ್ರತ್ವಗುಣಸಂಯೋಗಾದಿತಿ ॥

**ಮನುಃ:-** ಯಸ್ಮಿನ್ ಋಣಂ ಸನ್ನಯತಿ ಯೇನ ಚಾನಂತ್ಯಮಶ್ನುತೇ ॥
ಸ ಏವ ಧರ್ಮಜಃ ಪುತ್ರಃ ಕಾಮಜಾನಿತರಾನ್ವಿದುಃ ॥

**ಜೈಮಿನಿ:-** ಯಸ್ಮಿನ್ ಜಾತೇ ಮುಖಂ ದೃಷ್ಟ್ವಾ ಪಿತಾ ಚ ಹ್ಯನೃಣೋ ಭವೇತ್ ।
ಸ ಏವ ಧರ್ಮಜಃ ಪುತ್ರಃ ಇತಿ ವೇದವಿದೋ ವಿದುಃ ॥

**ವಿಜ್ಞಾನೇಶ್ವರಃ:-** ಏತಚ್ಚ ಪ್ರೇತಶ್ರಾದ್ಧ ಸಹಿತಂ ಸಪಿಂಡೀಕರಣಂ ಸಂವಿಭಕ್ತ ಧನೇಷ್ವಪಿ ಏಕೇನೈವ ಕಾರ್ಯಂ ನ ಸರ್ವೈಃ ಇತಿ ॥ (ಜ್ಯೇಷ್ಠೇನೇತ್ಯರ್ಥಃ)

**ಪ್ರಚೇತಾಃ :-** ಏಕಾದಶಾದ್ಯಾಃ ಕ್ರಮಶಃ ಜ್ಯೇಷ್ಠಸ್ತು ವಿಧಿವತ್ಕ್ರಿಯಾಮ್ ।
ಕುರ್ಯಾದೇಕೈಕಶಃ ಶ್ರಾದ್ಧಂ ಆಬ್ದಿಕಂ ತು ಪೃಥಕ್ ಪೃಥಕ್ ॥

**ಸಂವರ್ತ :-** ಮಾತಾಪಿತ್ರೋರ್ಮೃತೇಃ ಕಾಲೇ ಜ್ಯೇಷ್ಠೇ ದೇಶಾಂತರಸ್ಥಿತೇ ।
ಕನಿಷ್ಠೇನ ಪ್ರಕರ್ತವ್ಯಂ ಸಪಿಂಡೀಕರಣಂತದಾ ॥

ಕೃತಂ ಕನೀಯಸಾ ವಾಪಿ ಯಸ್ಯ ಶ್ರಾದ್ಧಂ ಸಪಿಂಡನಮ್ ।
ಜ್ಯೇಷ್ಠೋಽಪಿ ಹಿ ಸುತಃ ಕುರ್ಯಾತ್ ಸಪಿಂಡೀಕರಣಂ ಪುನಃ ॥

**ಸ್ಮೃತಿಸಾರಸರ್ವಸ್ವ :-** ನನ್ವತ್ರ ? ಏಕಭಾಂಡೇನ ಪಚತಾಂ ಪಿತೃದೇವಾರ್ಚನಾದಿಕಂ ।
ಏಕಂ ಭವೇತ್ ವಿಭಕ್ತಾನಾಂ ತದೇವ ಸ್ಯಾತ್ ಗೃಹೇ ಗೃಹೇ ॥
ಇತಿ ವಚನೇನ ಪ್ರತ್ಯೇಕ ಕಾರ್ಯತ್ವಸ್ಯ ಪ್ರಸಕ್ತೌ ಅಸ್ಯ ವಚನಸ್ಯ
ತದಪವಾದಕತ್ವಾತ್ ಕನಿಷ್ಠಕೃತಸ್ಯಾಪಿ ಸಪಿಂಡೀಕರಣಸ್ಯ ಅಕೃತತ್ವೇನ ।

ಕನಿಷ್ಠೇನಾಪಿ ಚ ಕರ್ತವ್ಯಾಃ ಪಿತ್ರೋಃ ಪಿಂಡೋದಕಕ್ರಿಯಾಃ ।
ಜ್ಯೇಷ್ಠೇನಾಪಿ ಚ ಕರ್ತವ್ಯಂ ಸಪಿಂಡೀಕರಣಂ ಪುನಃ ॥

ಯವೀಯಸಾ ಕೃತಂ ಕರ್ಮ ಪ್ರೇತಶಬ್ದಂ ವಿಹಾಯ ತು ।
ತದಗ್ರಜೇನ ಕರ್ತವ್ಯಂ ಸಪಿಂಡೀಕರಣಂ ಪುನಃ ॥ ಇತಿ ॥

ಇತಿ ಪುನಃಕರಣ ವಿಧಾನಾಚ್ಚ ತಥೈವ ವ್ಯಾಖ್ಯೇಯಮ್ ಇತಿ ॥
ಏತತ್ಸರ್ವಂ ವಿಶ್ವಾದರ್ಶೇ ಸ್ಪಷ್ಟಂ ದೃಷ್ಟವ್ಯಮ್ ॥ಇತಿ॥

**ಧರ್ಮಸಿಂಧುಃ:-** ಅತ್ರ ಸಾಂವತ್ಸರಿಕಾದಿಶ್ರಾದ್ಧೇಷು ದಾಹಾದ್ಯೌರ್ಧ್ವದೈಹಿಕಕ್ರಿಯಾಯಾಂ ಚ ಔರಸಪುತ್ರೋ ಮುಖ್ಯಾಧಿಕಾರೀ । ಔರಸಪುತ್ರಾಣಾಂ ಬಹುತ್ವೇ ಜ್ಯೇಷ್ಠ ಏವ ಅಧಿಕಾರೀ ॥ ಜ್ಯೇಷ್ಠಸ್ಯ ಅಭಾವೇ ಅಸನ್ನಿಧಾನೇ ವಾ ಪಾತಿತ್ಯಾದಿನಾ ಅಧಿಕಾರ

**ಅಭಾವೇ ವಾ ಜ್ಯೇಷ್ಠಾನುಜಃ** ॥ ಯತ್ತು ? ಜ್ಯೇಷ್ಠಾಸನ್ನಿಧೌ ಸರ್ವತಃ ಕನಿಷ್ಠೋಽಧಿಕಾರೀ ನ ಮಧ್ಯಮಾಃ ಇತಿ ತು ತನ್ನಿರ್ಮೂಲಮ್ ॥ ಅತ್ರ ಪುತ್ರಾಣಾಂ ವಿಭಕ್ತತ್ವೇ ಕನಿಷ್ಠೇಭ್ಯೋ ಧನಂ ಗೃಹೀತ್ವಾ ಜ್ಯೇಷ್ಠೇನೈವ ಸಪಿಂಡೀಕರಣಾಂತಃ ಕ್ರಿಯಾಃ ಕಾರ್ಯಾಃ ॥ ಸಾಂವತ್ಸರಿಕಾದಿಕಂ ತು ಪೃಥಕ್ಪೃಥಕ್ ॥ ಇತಿ॥

ತತ್ರ ಯದಾ ಜ್ಯೇಷ್ಠಾಸನ್ನಿಧೌ ಕನಿಷ್ಠೋ ದಾಹಾದಿಕಂ ಕರೋತಿ ತದಾ ಷೋಡಶಶ್ರಾದ್ಧಾಂತಮೇವ ಕುರ್ಯಾತ್ ನ ಸಪಿಂಡೀಕರಣಮ್ ॥ ವರ್ಷಪರ್ಯಂತಂ ಜ್ಯೇಷ್ಠಪ್ರತೀಕ್ಷಾಂ ಕುರ್ಯಾತ್ । ತನ್ಮಧ್ಯೇ ಜ್ಞಾತೇ ಜ್ಯೇಷ್ಠೇನೈವ ಕಾರ್ಯಂ ನೋಚೇತ್ ವರ್ಷಾಂತೇ ಕನಿಷ್ಠೇನಾಪಿ ಕಾರ್ಯಮ್ ॥ ಕನಿಷ್ಠೇನ ಕೃತಾವಪಿ ಜ್ಯೇಷ್ಠಪುತ್ರೇಣ (ಸಪಿಂಡೀಕರಣಂ) ಪುನಃ ಕಾರ್ಯಮಿತಿ ॥ ಔರಸಪುತ್ರಲಕ್ಷಣಮುಕ್ತಂ ॥

**ಮನುಃ**:- ಸ್ವಕ್ಷೇತ್ರೇ ಸಂಸ್ಕೃತಾಯಾಂ ತು ಸ್ವಯಮುತ್ಪಾದಯೇದ್ಧಿ ಯಮ್ ।
ತಮೌರಸಂ ವಿಜಾನೀಯಾತ್ ಪುತ್ರಂ ಪ್ರಥಮ ಕಲ್ಪಿತಮ್ ॥

**ಗಾರುಡೇ**:- ಸವರ್ಣಾಸು ಸವರ್ಣೇಭ್ಯಃ ಯೇ ಪುತ್ರಾ ಔರಸಾಃ ಖಗ ।
ತ ಏವ ಶ್ರಾದ್ಧದಾನೇನ ಪಿತೄಣಾಂ ಸ್ವರ್ಗ ಹೇತವಃ ॥

ಬಹವೋಽಪಿ ಯದಾ ಪುತ್ರಾಃ ವಿಧಿಮೇಕಃ ಸಮಾಚರೇತ್ ।
ದಶಗಾತ್ರಂ ಸಪಿಂಡತ್ವಂ ಶ್ರಾದ್ಧಾನ್ಯನ್ಯಾನಿ ಷೋಡಶ ॥

ಏಕೇನೈವ ತು ಕಾರ್ಯಾಣಿ ಸಂವಿಭಕ್ತಧನೇಷ್ವಪಿ ।
ವಿಭಕ್ತೈಸ್ತು ಪೃಥಕ್ಕಾರ್ಯಂ ಶ್ರಾದ್ಧಂ ಸಂವತ್ಸರಾದಿಕಂ ।
ಪುತ್ರೇಣ ಲೋಕಾನ್ ಜಯತಿ ಶ್ರುತಿರೇಷಾ ಸನಾತನೀ ॥

ಇತಿ ವೇದೈರಪಿ ಪ್ರೋಕ್ತಂ ಪುತ್ರಮಾಹಾತ್ಮ್ಯಮುತ್ತಮಮ್ ।
ಪಿತಾ ಪುತ್ರಮುಖಂ ದೃಷ್ಟ್ವಾ ಮುಚ್ಯತೇ ಪೈತೃಕಾದೃಣಾತ್ ॥

ತಸ್ಮಾಜ್ಜ್ಯೇಷ್ಠಸುತೋ ಭಕ್ತ್ಯಾ ದಶಗಾತ್ರಂ ಸಮಾಚರೇತ್ ।
ಏಕಭೋಜೀ ಭೂಮಿಶಾಯೀ ಸದಾ ಬ್ರಹ್ಮಪರಃ ಶುಚಿಃ ॥ ಇತಿ ॥

**ಮನುಃ**:- ಸದೃಶ ಸ್ತ್ರೀಷು ಜಾತಾನಾಂ ಪುತ್ರಾಣಾಮವಿಶೇಷತಃ ।
ನ ಮಾತೃತೋ ಜ್ಯೈಷ್ಠ್ಯಮಸ್ತಿ ಜನ್ಮತೋ ಜ್ಯೇಷ್ಠಮುಚ್ಯತೇ ॥
ಜನ್ಮಜ್ಯೇಷ್ಠೇನ ಚಾಹ್ವಾನಂ (ಸು) ಸ್ವಬ್ರಹ್ಮಣ್ಯಾಸ್ವಪಿ ಸ್ಮೃತಮ್ ।
ಯಮಯೋಶ್ಚೈವ ಗರ್ಭೇಷು ಜನ್ಮತೋ ಜ್ಯೇಷ್ಠತಾ ಸ್ಮೃತಾ ॥ ಇತಿ ॥

ಜ್ಯೋತಿಷ್ಟೋಮಯಜ್ಞೇ ವಪಾಹೋಮಾನಂತರಂ (ಸು) ಸ್ವಬ್ರಹ್ಮಣ್ಯಾಖ್ಯೇ ಕರ್ಮಣಿ ದೇವತಾಹ್ವಾನಂ ಜನ್ಮಜ್ಯೇಷ್ಠಪುತ್ರೇಣೈವ ಕಾರ್ಯಮಿತಿ ಶ್ರೌತನಿದರ್ಶನೇನ ಜನ್ಮಜ್ಯೇಷ್ಠಪುತ್ರಸ್ಯ ಮುಖ್ಯತ್ವಂ ವಿವೃತಮಿತಿ ಜ್ಞೇಯಮ್ ॥

**ಶೌನಕಃ**:–ಸಪಿಂಡೀಕರಣಂ ಪುತ್ರಃ ಪಿತುಃ ಕುರ್ವೀತ ಯೋಗ್ನಿಮಾನ್ ।
ಅನಗ್ನಿಸ್ತು ಕ್ರಿಯಾ ನಾನ್ಯಾ ಏಕೋದ್ದಿಷ್ಟಮ್ಯತೇ ಕ್ವಚಿತ್ ॥

**ಸ್ಮೃತ್ಯಂತರೇ**:– ಜ್ಯೇಷ್ಠಪುತ್ರೋನಗ್ನಿಮಾನ್ ಸ್ಯಾತ್ ಕನಿಷ್ಠಸ್ತ್ವಗ್ನಿಮಾನ್ ಯದಿ ।
ಕನಿಷ್ಠೇ ಏವ ಕುರ್ವೀತ ಸಪಿಂಡೀಕರಣಂ ಪಿತುಃ ॥ ಇತಿ ॥

ವಿಶೇಷ ವಚನಬಲಾತ್ ಜ್ಯೇಷ್ಠಕರ್ತೃಕಸಾಮಾನ್ಯವಚನಸ್ಯ ಬಾಧ ಇತಿ ಜ್ಞೇಯಮ್ ॥

**ಸ್ಮೃತಿಸಾರ ಸರ್ವಸ್ವೇ**:– ಸರ್ವಸ್ಯಾಪಿ ಪುತ್ರಸ್ಯ ಅನಗ್ನಿಕತ್ವೇ ಬ್ರಹ್ಮಚಾರಿತ್ವೇ ವಾ ಜ್ಯೇಷ್ಠ ಏವ ಲೌಕಿಕಾಗ್ನೌ (ಸರ್ವಂ, ಕುರ್ಯಾದಿತಿ )

**ಸ್ಮೃತೌ** :– ಸಪಿಂಡೀಕರಣಂ ಕುರ್ಯಾತ್ ಸ್ವಾತ್ಮಾಗ್ನೌ ತು ವಿಚಕ್ಷಣಃ ।
ಅಭಾವೇ ಲೌಕಿಕೇ ಹ್ಯಗ್ನೌ ಸರ್ವಂ ಸಂಪಾದಯೇದ್ಬುಧಃ ॥ ಇತಿ ॥

**ಮನುಃ**:–ಭ್ರಾತೄಣಾಂ ಏಕಜಾತಾನಾಂ ಏಕಶ್ಚೇತ್ ಪುತ್ರವಾನ್ ಭವೇತ್ ।
ತೇನ ಪುತ್ರೇಣ ತೇ ಸರ್ವೇ ಪುತ್ರಿಣೋ ಮನುರಬ್ರವೀತ್ ॥

**ದತ್ತಕಮೀಮಾಂಸಾ**:– ಭ್ರಾತೄಣಾಮೇಕಜಾತಾನಾಮಿತಿ ಅತ್ರ ಭ್ರಾತೄಣಾಂ ಪ್ರತಿಗೃಹೀತತ್ವಾತ್ ಪ್ರತಿಪಾದನಾತ್ ಗ್ರಾಹ್ಯತ್ವ ಅಭಾವೋಽವಗಮ್ಯತೇ । ಏಕಜಾತಾನಾಮ್ ಇತ್ಯನೇನ ಏಕೇನ ಪಿತ್ರಾ ಏಕಸ್ಯಾಂ ಮಾತರಿ ಜಾತಾನಾಮೇವ ಗೃಹೀತೃತ್ವಂ ನ ಭಿನ್ನೋದರಾಣಾಂ ಭಿನ್ನಪಿತೄಣಾಂ ವೇತಿ ಗಮ್ಯತೇ ॥

**ವ್ಯಾಖ್ಯಾತಂ ಚ ವಿಜ್ಞಾನೇಶ್ವರೇಣ** ಭ್ರಾತೄಣಾಮೇಕಜಾತಾನಾಮಿತಿ ಭ್ರಾತೃಪುತ್ರಸ್ಯ ಪುತ್ರೀಕರಣ ಸಂಭವೇ ಅನ್ಯೇಷಾಂ ಪುತ್ರೀಕರಣ ನಿಷೇಧಾರ್ಥಂ ನ ಪುನಃ ಪುತ್ರತ್ವಪ್ರತಿಪಾದನಾಯ ॥ ನ ಅಪುತ್ರಸ್ಯ ಲೋಕೋಽಸ್ತಿ ಜಾಯಮಾನೋ ವೈ ಮನುಷ್ಯಃ ಇತ್ಯಾದಿ ಶಾಸ್ತ್ರಬೋಧಿತಸ್ಯ ಅಪ್ರಜಸ್ತ್ವಪ್ರಯುಕ್ತದೋಷಸ್ಯ ನಿವೃತ್ತಿಃ ॥ ಪುತ್ರಕಾರ್ಯಭೂತಾ ದ್ವಾದಶಪುತ್ರಭಿನ್ನೇನಾಪಿ ಭ್ರಾತೃಸುತೇನ ಅಪುತ್ರಪಿತೃವ್ಯಸ್ಯ ಭವತೀತಿ ಜ್ಞಾಪನಾರ್ಥಮ್ ॥ಇತಿ॥

**ವಿವೃತಂಚೈತತ್ ಚಂದ್ರಿಕಾಯಾಂ ಉಭಯತ್ರಾಪಿ**– ಯದ್ಯೇಕಜಾತಾ ಇತ್ಯೇವಂ ವಚನದ್ವಯೇಪಿ ಭ್ರಾತೃಸುತೇ ಸಪತ್ನೀಸುತೇ ಚ ಪುತ್ರಪ್ರತಿನಿಧಿತಯಾ ಕಥಂಚಿತ್ ಸಂಭವತಿ । ಅನ್ಯೋನ್ಯಪ್ರತಿನಿಧಿಃ ಕಾರ್ಯ ॥ಇತಿ॥ ವಿಜ್ಞಾನೇಶ್ವರೋಽಪಿ ಭಾವನಂ ವಚೋ ವ್ಯಾಚಷ್ಟೇ ॥ ಪುತ್ರಿಣಃ ಇತ್ಯತ್ರ ಇನ್ನಂತಪ್ರತ್ಯಯತ್ವಾತ್ ಯೇಷಾಂ ಪುತ್ರ ಅಸ್ತಿ ತೇ ಪುತ್ರಿಣಃ ಇತ್ಯರ್ಥಜ್ಞಾನಮಾತ್ರೇಣ ಭ್ರಾತೃಪುತ್ರಸ್ಯ ಪುತ್ರೀಕರಣಸಂಭವೇ ಅನ್ಯೇಷಾಂ ಪುತ್ರೀಕರಣನಿಷೇಧಾರ್ಥಂ ನ ಪುನಃ ಪುತ್ರತ್ವಪ್ರತಿಪಾದನಾಯ । ತತ್ಸುತಾ ಇತ್ಯನೇನ ವಿರೋಧಾತ್ ಇತಿ । (ಯಾ. ಸ್ಮೃ ೨–೧೩೨ ಮಿತಾಕ್ಷರೀ) ಸಂಗಚ್ಛತೇ ಚೈಕಸ್ಯಾಪಿ ಸುತೇ ಜಾತೇ ಇತಿ । ಯದ್ಯೇಕಃ ಪುತ್ರವಾನ್ ಭವೇತ್ ಇತಿ ಚ ಜನನಮಾತ್ರೇಣ ಸತ್ತಾಮಾತ್ರೇಣ ಚ ಇತರೇಷಾಂ ಪುತ್ರವತ್ವಕೀರ್ತನಮ್ ॥ಉಚಿತಂ ಚೈತತ್ । ಸ್ವಪುತ್ರೇಣೇವ ಭ್ರಾತೃಸುತೇನಾಪಿ ಸಮಸ್ತಪಿತೄಣಾಂ

ಪಿಂಡೋದಕಕ್ರಿಯಾ ನಿರ್ವಾಹಸ್ಯ ವಂಶವಿಚ್ಛೇದಾತ್ ಪರಿಹಾರಸ್ಯ ಚ ಸಂಭವಾತ್ ।ಅನೇನ ಭ್ರಾತೃಪುತ್ರವತಃ ಅಪುತ್ರಸ್ಯ ಪಿತೃವ್ಯಸ್ಯ ದತ್ತಕಾದಿಗ್ರಹಣಪ್ರವೃತ್ತಿಃ ನಿರಸ್ಯತೇ ॥ಇತಿ॥

**ಶೌನಕಃ:–** ಅಪುತ್ರಸ್ಯ ಪಿತೃವ್ಯಸ್ಯ ತತ್ಪುತ್ರೋಭ್ರಾತೃಜೋ ಭವೇತ್ ।
ಸ ಏವ ತಸ್ಯ ಕುರ್ವೀತ ಶ್ರಾದ್ಧಪಿಂಡೋದಕ ಕ್ರಿಯಾಃ ॥

**ಬ್ರಹಸ್ಪತಿ:–** ಯದ್ಯೇಕಜಾತಾ ಬಹವಃ ಭ್ರಾತರಃ ಸ್ಯುಃ ಸಹೋದರಾಃ ।
ಏಕಸ್ಯಾಪಿ ಸುತೇ ಜಾತೇ ಸರ್ವೇ ತೇ ಪುತ್ರಿಣಃ ಸ್ಮೃತಾಃ ॥ಇತಿ ॥

ಪತ್ನ್ಯಾದಿಭ್ಯಃ ಪೂರ್ವಂ ಮದೀಯಪಿಂಡದಾನರಿಕ್ಥಾಧಿಕಾರೀ ಕಶ್ಚಿತ್ ಭವೇದಿತಿ ಕಾಮನಾಂತಾಂ ಭ್ರಾತೃಪುತ್ರಸ್ಯೈವ ದತ್ತಕವಿಧಿನಾ ಸ್ವೀಕಾರಸಿದ್ಧಿರಪ್ಯರ್ಥಾಜ್ಞಾಯಮಾನಾ ಭವತೀತಿ ಸಂಸ್ಕಾರಕೌಸ್ತುಭೇ ಚತುಶ್ಚತ್ವಾರಿಂಶತ್ಪ್ರಷ್ಠೇ ನಿರೂಪಿತಮಿತಿ (ಗೋಕರ್ಣವಿದ್ವದ್ಭಿಃ ಪ್ರಕಾಶಿತಾ ಬೋಧಾಯನೀಯಬ್ರಹ್ಮಕರ್ಮ ಸಮುಚ್ಚಯೇ ಪಿತೃಮೇಧಕಾಂಡೇ ಜೀವತ್ಪಿತೃಕಕರ್ತೃಕೇಽಪಿ) ॥ ಜೀವತ್ಪಿತೃಕಃ ಸ್ವಮಾತುಃ ಅಪುತ್ರಸಾಪತ್ನೀಮಾತುಃ ಸ್ವಪುತ್ರಸಪತ್ನೀಪುತ್ರರಹಿತಭಾರ್ಯಾಂತರಾಃ ಅಪುತ್ರಪಿತೃವ್ಯಸ್ಯ ಅಪುತ್ರಮಾತಾಮಹಮಾತಾಹ್ಯೋಶ್ಚ ದಾಹಾದಿ ಪ್ರೇತಕರ್ಮಾಣಿ ಕುರ್ಯಾದಿತಿ॥

**ಧರ್ಮಸಿಂಧು :–** ಭ್ರಾತೃಪುತ್ರಃ ಅಪುತ್ರಸ್ಯ ಪಿತೃವ್ಯಸ್ಯ ಪ್ರತ್ಯಬ್ದಂ ಶ್ರಾದ್ಧಂ ಸಪಿಂಡಂ ಕುರ್ಯಾತ್ ಏವಂ (ಕನಿಷ್ಠಭ್ರಾತಾಪ್ಯಪುತ್ರಸ್ಯ ಜ್ಯೇಷ್ಠಭ್ರಾತುಃ ಪ್ರತ್ಯಬ್ದಂ ತಥಾ ಸಾಪತ್ನಮಾತುಃ ಶ್ರಾದ್ಧಂ ಇತ್ಥಂ ಚ ಶ್ರಾದ್ಧಚತುಷ್ಟಯೇ ಜೀವತ್ಪಿತೃಕಸ್ಯಾಪಿ ಅಧಿಕಾರಃ ॥ಇತಿ॥

## ೭ ಆಶೌಚಾಂತ್ಯದ ಕೃತ್ಯಗಳು

ಆಶೌಚಾಂತ್ಯದಲ್ಲಿ (ಹನ್ನೊಂದನೇ ದಿನ) ಸಂಗವ ಕಾಲದಲ್ಲಿ ಸ್ನಾನ ಮಾಡಿ, ಬ್ರಾಹ್ಮಣರು ಜಲವನ್ನು ಮುಟ್ಟಬೇಕು, ಕ್ಷತ್ರಿಯರು ಆಯುಧ ಅಥವಾ ರಥವನ್ನು ಮುಟ್ಟಬೇಕು. ವೈಶ್ಯರು ತಕ್ಕಡೆಯನ್ನು ಅಥವಾ ಹಗ್ಗವನ್ನು ಮುಟ್ಟಬೇಕು. ಶೂದ್ರರು ದಂಡವನ್ನು ಮುಟ್ಟಬೇಕು. ಮುಖ್ಯ ಯಜಮಾನನು ಹನ್ನೊಂದನೇ ದಿವಸ ಪಂಚಗವ್ಯಪ್ರಾಶನ, ಯಜ್ಞೋಪವೀತ ಧಾರಣ, ಶುದ್ಧಿಪುಣ್ಯಾಹವಾಚನೆ ನಡೆಸಿ, ಬ್ರಾಹ್ಮಣರ ಭೋಜನವನ್ನು ಮಾಡಬೇಕು. ಇತರರೂ ಸಹ ಪಂಚಗವ್ಯ ಪ್ರಾಶನ, ಯಜ್ಞೋಪವೀತ ಧಾರಣ ಮಾಡುವದು ಸಂಪ್ರದಾಯದಿಂದ ಬಂದಿರುವುದು ಎಂದು ತಿಳಿಯಬೇಕು.

**ಅನುಷ್ಠಿತಾಶೌಚಃ** ಯಜಮಾನಃ ಸಂಗವೇ ಸ್ನಾತ್ವಾ ವಿಪ್ರಃ ಅಂಬು ಸ್ಪೃಷ್ಟ್ವಾ ಶುದ್ಧ್ಯತಿ. ಕ್ಷತ್ರಿಯಃ ರಥಂ ಆಯುಧಂ ವಾ ಸ್ಪೃಷ್ಟ್ವಾ ಶುದ್ಧ್ಯತಿ, ವೈಶ್ಯಃ ಪ್ರತೋದಂ, ರಶ್ಮಿಂ ವಾ ಸ್ಪೃಷ್ಟ್ವಾ ಶುದ್ಧ್ಯತಿ, ಶೂದ್ರಸ್ತು ದಂಡಂ ಸ್ಪೃಷ್ಟ್ವಾ ಶುದ್ಧ್ಯತಿ ।

**ಸ್ಮೃತಿಸಂಗ್ರಹೇ :** ಆಶೌಚಾಂತೇ ಕೃತಸ್ನಾನಃ ಸ್ವಸ್ತಿವಾಚನಪೂರ್ವಕಮ್ ।
ಬ್ರಾಹ್ಮಣಾನ್ ಭೋಜಯೇದ್ಭಕ್ತ್ಯಾ ಶುದ್ಧಯೇ ವಿಷ್ಣುತುಷ್ಟಯೇ ॥

**ಗಾರುಡೇ :** ವಾರ್ಯಾಯುಧಪ್ರತೋದಸ್ತು ದಂಡಸ್ತು ದ್ವಿಜಭೋಜನಾತ್ ।
ಸ್ಪೃಷ್ಟವ್ಯಾನಂತರಂ ವರ್ಣಾಃ ಶುದ್ಧ್ಯೇರಂಸ್ತೇ ತತಃ ಕ್ರಮಾತ್ ॥ ಇತಿ ।
(ಏತದ್ಯಜಮಾನಸ್ಯ ಕೃತ್ಯಮ್ ಇತಿ)

## ೮. ಅಥ ಸಂಕೋಚ ವಿಧಿ

ಸ್ಮೃತಿಸಾರಸಮುಚ್ಚಯ – ಸೂರಿ ಶಾಸ್ತ್ರಿಗಳ ಕೈ ಪಟ್ಟಿಯಿಂದ :

ಕೂಟಸ್ಥ ಪುರುಷಮಾರಭ್ಯ ಸಪ್ತಮಪುರುಷ ವ್ಯತಿಕ್ರಮಣಾನಂತರಂ ಅಷ್ಟಮೋ ಪುರುಷಃ ಮರಣದಿನಾದಾರಭ್ಯ ಚತುರ್ಥದಿವಸೇ ಗತಸಪಿಂಡೈಸ್ಸಹ ದೇವಾಲಯಂ ನದೀತೀರಂ ವಾ ಗತ್ವಾ ಶ್ರುತಿಶೀಲಸಂಪನ್ನಾನ್ ಬ್ರಾಹ್ಮಣಾನಾಹೂಯ ಸರ್ವೇ ಸಪಿಂಡಾಃ ತೇಷಾಂ ಮುಖ್ಯಸ್ಸ ಕ್ಷೌರಾದಿಕಂ ಕೃತ್ವಾ ಸ್ನಾತ್ವಾ ಸ್ನಾನಾಂಗ ದೇವಋಷಿಪಿತೃತರ್ಪಣಾದಿಕಂ ಕೃತ್ವಾ ತೇಷಾಂ ಮಧ್ಯೇ ಯೋ ವೃದ್ಧಃ ಸಃ ಸರ್ವೇಷಾಂ ಪ್ರತಿನಿಧಿತಯಾ ಯಜಮಾನೋ ಭೂತ್ವಾ ಪರಿಷತ್ವೇನ ಚತುರೋ ಬ್ರಾಹ್ಮಣಾನ್ ಪ್ರತಿವಚನಸಮರ್ಥಾನುಪವೇಶ್ಯ ಪ್ರಾಜಾಪತ್ಯತ್ರಯಂ ಅಬ್ದಕೃಚ್ಛ್ರಂ ವಾ ಕುರ್ಯಾತ್ ॥

ಪ್ರಾಜಾಪತ್ಯಕೃಚ್ಛ್ರ ಲಕ್ಷಣಂ ತು :
ತ್ರ್ಯಹಂ ಪ್ರಾತಃ ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಮ್ ।
ಪುನಃ ತ್ರ್ಯಹಂ ಚ ನಾಶ್ನೀಯಾತ್ ಪ್ರಾಜಾಪತ್ಯಃ ಸ ಉಚ್ಯತೇ ॥
ಏವಂ ದ್ವಾದಶದಿನಾತ್ಮಕಂ ವ್ರತಮಾಚರೇತ್ ಪ್ರತಿದಿನಂ ದ್ವಿಶತಂ ಪ್ರಾಣಾಯಾಮಃ ಸಹಸ್ರ ಕೃತ್ವಃ ಗಾಯತ್ರೀಜಪಃ ಕಾರ್ಯಃ (ಇದಮೇಕಂ ಪ್ರಜಾಪತ್ಯಂ) ಏತತ್ಕರ್ಮಣಿ ಅಧಿಕಾರಸಿಧ್ಯರ್ಥಂ ತ್ರಿರಾವರ್ತಯೇತ್) ಅಬ್ದ ಕೃಚ್ಛ್ರಸ್ಯ ಏಕಸ್ಯ ತ್ರಿಂಶತ್‌ಗಾವಃ ಸಹಸ್ರಾದಿಸಂಖ್ಯಾಕಃ ತಿಲಹೋಮಃ ದ್ವಾದಶಬ್ರಾಹ್ಮಣಭೋಜನಂ ಸಮುದ್ರಗಾನದೀಸ್ನಾನಂ ದ್ವಿಶತಂ ಪ್ರಾಣಾಯಾಮಾಃ ಸಹಸ್ರಕೃತ್ವಃ ಗಾಯತ್ರೀ ಜಪಃ ಏತೇ ಷಟ್ ಪ್ರತ್ಯೇಕಂ ಪತ್ಯಾಮ್ನಾಯಾಃ ॥

ಸಾಕ್ಷಾತ್ ಕೃಚ್ಛ್ರಾಚರಣೇ (ಗೋಮೂಲ್ಯಂ) ದಕ್ಷಿಣಾಂ ಗೃಹಿತ್ವಾ ।
ಪ್ರದಕ್ಷಿಣತ್ರಯಂ ಕೃತ್ವಾ । ಪರಿಷತ್‌ಬ್ರಾಹ್ಮಣಾನ್ ಪ್ರಾರ್ಥಯೇತ್ ॥

ನಮಃ ಸಕಲಕಲ್ಯಾಣ ದಾಯಿನೇ ಬ್ರಹ್ಮರೂಪಿಣೇ । ಸದಸೇ
ಸರ್ವಪೂಜ್ಯಾಯ ದುಷ್ಕೃತಾರಣ್ಯವಹ್ನಯೇ (ಹೇತವೇ) ॥
ಯಾವತೀರ್ವೈ ದೇವತಾಃ –ಪ್ರೀಣಾತಿ ಭಾಗಧೇಯೇನೈವೈನಂ –ಉದ್ಧರತಿ

ನಮೋಽಬ್ರಹ್ಮಣ್ಯ ದೇವಾಯ – ನಮೋ ನಮಃ– ಹೇ ಸಂತಃ ವಿದ್ವತ್ಪರಿಷದಃ ಅಸ್ಮಿನ್ ಕರಿಷ್ಯಮಾಣ ಅಘಸಂಕೋಚಕರ್ಮಣಿ ಯಥಾಶಾಸ್ತ್ರಂ ಧರ್ಮಶಾಸ್ತ್ರ ಪರ್ಯಾಲೋಚನಯಾ ಯಥಾವತ್ ಕೃಚ್ಛ್ರಾಚರಣಂ ಉಪದಿಶಂತು ಭವಂತಃ ಇತ್ಯಂಜಲಿಂ ಬಧ್ವಾ ಪ್ರಾರ್ಥಯೇತ್ ॥ ತತಃ ತೇ ಪರಿಷದ್ಬ್ರಾಹ್ಮಣಾಃ ಮಹಾನಿಬಂಧಪೂಜನಂ ಕೃತ್ವಾ ಧರ್ಮಶಾಸ್ತ್ರಪರ್ಯಾಲೋಚನಯಾ ಯೂಯಂ ಪ್ರಾಜಾಪತ್ಯಕೃಚ್ಛ್ರತ್ರಯಂ ಅಬ್ದಕೃಚ್ಛ್ರಂ ವಾ ಕುರುತ ಇತಿ ಉಪದಿಶೇಯುಃ ॥

ತತೋ ಯಜಮಾನಃ ಆಚಮನ ಪ್ರಾಣಾಯಾಮೌ ಕೃತ್ವಾ ದೇಶಕಲೌ ಸಂಕೀರ್ತ್ಯ ವಯಂ ಇತಃ ಪೂರ್ವಂ ಸಾಪ್ತಪುರುಷಸಾಪಿಂಡ್ಯತ್ವಜ್ಞಾನೇನ ಜನನಮರಣಾಶೌಚಂ ದಶರಾತ್ರಂ ಗ್ರಹೀತವಂತಃ ಆಸ್ಮಃ. ಪರಂತು, ಇದಾನೀಂ ಸಾಪ್ತಪುರುಷ ಸಾಪಿಂಡ್ಯತ್ವ ವ್ಯತಿಕ್ರಮಣಜ್ಞಾನಾತ್ ಇತಃ ಪರಂ ಸಾಕುಲ್ಯತ್ವ ಸಿದ್ಧ್ಯಾ ಜನನ–ಮರಣ ಆಶೌಚಯೋಃ ತ್ರಿರಾತ್ರೇಣೈವ ನಿವೃತ್ತಿಕಾಮಾಃ ಅಘಸಂಕೋಚಾಖ್ಯಂ ಕರ್ಮ ಕರಿಷ್ಯಾಮಹೇ ॥ ಇತಿ ಸಂಕಲ್ಪ್ಯ ಯಥಾವತ್ ದಕ್ಷಿಣಾಂ ಗೃಹಿತ್ವಾ ಬ್ರಾಹ್ಮಣಪ್ರದಕ್ಷಿಣ ತ್ರಯಂ ಕೃತ್ವಾ ಗತಸಪಿಂಡಾಃ ವಯಂ ಇತಃ ಪೂರ್ವಂ ಸಪ್ತಪುರುಷ ಸಾಪಿಂಡ್ಯತ್ವ ಜ್ಞಾನೇನ ಜನನ ಮರಣಾಶೌಚಂ ದಶರಾತ್ರಂ ಗೃಹೀತವಂತಃ ಆಸ್ಮಃ ॥ ಇದಾನೀಂ ತು ಸಪ್ತಪುರಷ ಸಾಪಿಂಡ್ಯತ್ವ ವ್ಯತಿಕ್ರಮಣಜ್ಞಾನೇನ ಇತಃ ಪರಂ ಸಾಕುಲ್ಯತ್ವ ಸಿದ್ಧ್ಯಾ ಜನನಮರಣಾಶೌಚಸ್ಯ ತ್ರಿರಾತ್ರಾಚರಣೇನೈವ ಶುದ್ಧಿರಸ್ತ್ವಿತಿ ಭವಂತಃ ಅನುಗೃಹ್ಣಂತು ಇತಿ ದಕ್ಷಿಣಾಂ ಪರಿಷದಿ ಸಮರ್ಪ್ಯ ಜಲಧಾರಾಪೂರ್ವಕಂ ಉತ್ಸೃಜೇತ್ ॥

ಸಾಕ್ಷಾತ್ ಕೃಚ್ಛ್ರಾಚರಣೇ ಅಶಕ್ತಃ ಗೋಮೂಲ್ಯಂ ಸಮರ್ಪಯೇತ್ ॥
ಯಜ್ಞಸಾಧನ ಭೂತಾ ಯಾ ವಿಶ್ವಸ್ಯಾಘೌಘನಾಶಿನೀ ।
ವಿಶ್ವರೂಪಧರೋದೇವಃ ಪ್ರೀಯತಾಂ ಅನಯಾ ಗವಾ ॥
ಇದಂ ಗೋನಿಷ್ಕ್ರಯೀಭೂತದ್ರವ್ಯಯಥಾಂಶಂ ಬ್ರಾಹ್ಮಣೇಭ್ಯಃ ದಾತುಮಹಮುತ್ಸೃಜೇ ॥

ಇತಿ ಜಲಧಾರಾಪೂರ್ವಕಂ ಉತ್ಸೃಜೇತ್ ಇತಿ ಕೃಚ್ಛ್ರಾಚರಣಂ ಕೃತ್ವಾ । ಗಣಪತಿಂ ಸಂಪೂಜ್ಯ ಪುಣ್ಯಾಹಂ ವಾಚಯೇತ್ ॥ ಸವಿತಾ ಪ್ರೀಯತಾಂ ಪ್ರಜಾಪತಿಶ್ಚ ಪ್ರೀಯತಾಮಿತಿ ವಿಶೇಷಃ ॥ ಋತ್ವಿಗ್ವರಣಂ ಕೃತ್ವಾ ಅಗ್ನಿಂ ಪ್ರತಿಷ್ಠಾಪ್ಯ ಅನ್ವಾದಧ್ಯಾತ್ ॥ ತಿಲಹೋಮಂ ಕರಿಷ್ಯೇ । ಆಘಾರಂ ಆಪೂರ್ವಿಕಂ ವಾ ತಂತ್ರಂ ಚಿತ್ತಿರ್ನಾಮಾಗ್ನೀ (ಪವಮಾನೋ ವಾ) ಸವಿತಾದೇವತಾ ಚರುರ್ಹವಿಃ ಸಮಸ್ತ ವ್ಯಾಹೃತಿಮಂತ್ರೇಣ (ಸಾವಿತ್ರ್ಯಾ ವಾ) ಆಜ್ಯಾಕ್ತ ತಿಲದ್ರವ್ಯೇಣ ಸಹಸ್ರಾದಿಸಂಖ್ಯಾಕಾಹುತಿಭಿಃ ಸದ್ಯೋ ಯಕ್ಷೇ (ಕೇಚನ ಅಘಮರ್ಷಣಮಂತ್ರೈಃ ಅಘಸೂಕ್ತಮಂತ್ರೈಶ್ಚ ಸಕೃದಾವೃತ್ಯಾ ಕೇವಲಾಜ್ಯೇನ ಜುಹೋತಿ) ಇತಿ ಸಂಕಲ್ಪ್ಯ ಹೋಮಂ ಸಮಾಪಯೇತ್ । ತದನಂತರಂ ಶುದ್ಧಿಕಾಮಾಃ ಸರ್ವೇ (ಸಪಿಂಡಾಃ) ಸರ್ವೇ ಜನಾಃ ಪುಣ್ಯತೀರ್ಥೇ

ಸ್ನಾತ್ವೋದೇತ್ಯ ಅಹತಂ ವಾಸಃ ಪರಿಧಾಯ ಬ್ರಹ್ಮಕೂರ್ಚಹೋಮಂ (ಕೂಷ್ಮಾಂಡ ಹೋಮಂ ಚ) ಕೃತ್ವಾ ಸ್ನಾನಪವನಾದಿಕಂ ಕೃತ್ವಾ ಪಂಚಗವ್ಯಂ ಪ್ರಾಶ್ಯ ಯಜ್ಞೋಪವೀತ ಧಾರಣಂ ಕೃತ್ವಾ ತ್ರಿಂಶತ್ ಪ್ರಾಣಾಯಾಮಂ ಸಹಸ್ರಾದಿಸಂಖ್ಯಾಕಗಾಯತ್ರೀ ಜಪಂ ಚ ಕುರ್ಯಾತ್ । ಯಥಾಶಕ್ತಿ ಬ್ರಾಹ್ಮಣಾನ್ ಭೋಜಯೇತ್ । ದಕ್ಷಿಣಾಂ ದದ್ಯಾದಿತಿ ॥

॥ ಇತ್ಯಘ ಸಂಕೋಚ ವಿಧಿಃ ॥

**ವಂಶಶುದ್ಧಿಃ**

ಸ್ಮೃತಿಸಾರ ಸಮುಚ್ಚಯೇ (ತದ್ವಿಧಿಃ)

**ಕಾತ್ಯಾಯನಃ**:–ಘಟೋತ್ಸರ್ಗಂ ಪ್ರಕುರ್ವೀತ ನಾರೀ ವಾ ಪುರುಷೋಽಪಿವಾ ।
ಜಾತ್ಯಾ ಪರಿಭ್ರಷ್ಟತಯಾ ತಯೋರೇವ ನ ಸಂಶಯಃ ॥

**ಲೋಗಾಕ್ಷಿಃ**:–ಯಾ ನಾರೀ ವಿಧವಾ ಜಾತಾ ಗರ್ಭಿಣೀ ಪ್ರಭವಿಷ್ಯತಿ ।
ಘಟೋತ್ಸರ್ಗಂ ಪ್ರಕುರ್ವೀತ ತಸ್ಯಾ ಇತಿ ವಿನಿಶ್ಚಿತಃ ॥

**ಗೋಭಿಲಃ**:– ಯಃ ಪುಮಾನ್ ಬ್ರಾಹ್ಮಣೋ ಭೂತ್ವಾ ಶೂದ್ರಸ್ತ್ರಿಯಮಭಿವ್ರಜೇತ್ ।
ಸ ಶೂದ್ರವದ್ಬಹಿಃ ಕಾರ್ಯಃ ಘಟೋತ್ಸರ್ಗವಿಧಾನತಃ ॥

**ವೃದ್ಧಯಾಜ್ಞವಲ್ಕ್ಯಃ**:– ನಾರೀ ವಾ ಪುರುಷೋ ವಾಪಿ ಜಾತ್ಯಂತರಸಮಾಗಮೇ ।
ತದನ್ನಭೋಜನಾತ್ಯಕ್ತೌ ಭವೇತಾಂ ಬ್ರಾಹ್ಮಣಾವಪಿ ॥

ತದೇತೈಃ ವಚನೈಃ ವಿಧವಾಯಾಂ ಗರ್ಭಿಣ್ಯಾಂ ಪುರುಷಸ್ಯ ಶೂದ್ರಯೋನಿಸಂಬಂಧೇ ತಯೋಃ ಏವ ಶೂದ್ರಾನ್ನಭೋಜನೇ ಘಟೋತ್ಸರ್ಗಪೂರ್ವಂ ಪರಿತ್ಯಾಗೋ ಯುಕ್ತತರ ಇತಿ ಸರ್ವಮುನಿಮತಸಿದ್ಧಾಂತಃ ॥ ನನು? ಘಟೋತ್ಸರ್ಗಪೂರ್ವಂ ಪರಿತ್ಯಾಗ ಉಕ್ತಃ ಕೋಽಯಂ ಘಟೋತ್ಸರ್ಗೋ ನಾಮ? ಕೇನ ಪ್ರಕಾರೇಣ ಸ ವಿಧಿಃ ಕರ್ತವ್ಯಃ ಇತಿ ಸಂಶಯಃ ॥

**ದೇವಲಃ**:– ಅರಣ್ಯೇ ಬಂಧುಭಿರ್ಗತ್ವಾ ನವವಸ್ತ್ರೇಣ ಸಂಯುತಮ್ ।
ಘಟಂ ಆಸ್ಫೋಟಯೇತ್ತತ್ರ ಜಲಪೂರ್ಣಂ. ನ ಸಂಶಯಃ ॥

**ವೃದ್ಧ ಹಾರೀತಃ**:–ಜಲಪೂರ್ಣಂ ಘಟಂ ನೀತ್ವಾ ಬಂದುಭಿಃ ಸಕಲೈರಪಿ ।
ಅರಣ್ಯೇ ವಸ್ತ್ರಸಂಯುಕ್ತಂ ಪಾದೈಃ ಸಂಭಿದ್ಯತೇ ತರಾಮ್ ॥ಇತಿ॥

ಏತತ್ ವಿಧಾನೇನ ಘಟಸ್ಫೋಟೇ ಜಾತೇ ಸಜೀವನ್ನಪಿ ಮೃತ ಏವೇತಿ ವಿಜ್ಞಾಯ ತತಃ (ತಸ್ಯ) ಕರ್ಮಕುರ್ಯಾದಿತಿ ನಿಶ್ಚಯಃ ॥

**ಸ್ಮೃತಿ ತರಂಗಿಣ್ಯಾಂ**:–ಘಟಸ್ಫೋಟೇನ ಸಹಸಾ ಪರಾಭಿಮುಖತಾಂ ಗತಾಃ ।
ನಿವೃತ್ತಾಃ ಕುತ್ರ ಚಿದ್ದೇಶೇ ಶಾಖಾ ಸಂಸ್ಮುರ್ಯುರಾದರಾತ್ ॥

**ಸ್ಮೃತಿಚಿಂತಾಮಣೌ:-**
ಯತ್ರೈವ ಜಾತಂ ಪತಿತತ್ವಮೇತತ್ ವಿಲೋಕ್ಯ ಕುರ್ಯಾತ್ ಘಟಭೇದಮತ್ರ ।
ಶಾಖಾಭಿಧಾನೇನ ತು ಸಂಸ್ಕೃತಿಃ ಸ್ಯಾತ್ ಯದಾ ತದೈವೇತಿ ವಿನಿಶ್ಚಿತಂ ಸ್ಯಾತ್ ॥

**ಸ್ಮೃತಿಚಂದ್ರಿಕಾಯಾಂ:-**ಕೃತ್ವಾ ತದ್ಘಟಭೇದನಂ ಚ ಸಕಲಾ ಯದ್ಬಾಂಧವೋ ದೂರತಃ ।
ಶಾಖಾಸಂಸ್ಕೃತಿಮಸ್ಯ ಶಾಸ್ತ್ರವಿಹಿತಂ ಕುರ್ವೀತ ತಸ್ಮಾತ್ಪರಮ್ ॥

ಕೃತ್ವೈವಂ ಮೃತಿಸೂತಕಂ ದಶದಿನಂ ತಸ್ಮಾತ್ಪರಸ್ಮಾದಪಿ ।
ಪ್ರತ್ಯಕ್ಷಂ ಸಕಲಂ ಚ ಕರ್ಮನಿಚಯಂ ಕುರ್ಯುರ್ಜಪ್ತ್ವ ವಿಷ್ಣೋಃ ಪರಮ್ ॥
ಅತ್ರ ಹಿ, ವಿಷ್ಣೋಃ ಪರಂ ಇತ್ಯುಕ್ತಮ್ । ಕೋಽಯಮರ್ಥೋಽಯಮಸ್ಯ ವಿಜ್ಞಾಯತೇತಿ ವಿವಕ್ಷಾಯಾಂ ಸರ್ವಂ ವಿಷ್ಣುನಾಮಪೂರ್ವಕಂ ಇತಿ ವಿವೇಕಃ ॥ ತದತ್ರ ಕೇನ ವಿಧಾನೇನ ತತಃ ಶುದ್ಧಿರಿತಿ ವಿವಕ್ಷಾಯಾಂ ನಾರಾಯಣಬಲಿವಿಧಾನೇನ ಇತಿ ವಿವೇಕೋ ವಕ್ತವ್ಯಃ ॥

**ಯದಾಹ ಗೌತಮಃ:-** ಪತಿತಸ್ಯೈವ ಸಂಸ್ಕಾರಃ ನಾರಾಯಣಬಲಿರ್ವಿಧಿಃ ।
ಸರ್ವಂ ಚ ವಿಷ್ಣುನಾಮ್ನೈವ ಸಂಸ್ಕಾರೋಽಸ್ಯ ಭವಿಷ್ಯತಿ ॥ ಇತಿ ಧ್ಯೇಯಮ್ ॥
ಅತ್ರ ಪ್ರಯೋಗಪದ್ಧತಿಃ ವೆಂಕಟೇಶೀಪ್ರಯೋಗಮಾಲಾದಿಷು ದ್ರಷ್ಟವ್ಯಾ ॥ ಇತಿ ॥

॥ ಸರ್ವಮನವದ್ಯಮ್ ॥

॥ ಇತಿ ಶಮ್ ॥

ಅಶೌಚದ ಆಚರಣೆಗೂ ಧರ್ಮಶಾಸ್ತ್ರವು ಹೆಚ್ಚಿನ ಮಹತ್ವವನ್ನು ನೀಡಿರುವುದು ಕಂಡುಬರುತ್ತದೆ. ಯಾವ ಕಾಲದಲ್ಲಿ ಯಾವ ವ್ಯಕ್ತಿಯು ಹೇಗೆ ಅಶುಚಿಯಾಗುತ್ತಾನೆ, ಅಶೌಚದಲ್ಲಿ ಯಾವುದು ಕರ್ತವ್ಯ, ಯಾವುದು ಅಕರ್ತವ್ಯ, ಅಶೌಚದ ಪರಿಮಾಣ ಎಷ್ಟು, ಅಶೌಚವನ್ನು ಕಳೆದು ಶುಚಿಯಾಗುವುದಕ್ಕೆ ಇರುವ ಅನುಷ್ಠಾನಗಳೇನು, ಇತ್ಯಾದಿ ಅನೇಕ ವಿಷಯಗಳನ್ನು ಪ್ರಾಚೀನ ಋಷಿ-ಮುನಿಗಳು ಧರ್ಮಶಾಸ್ತ್ರ-ಸ್ಮೃತಿಗ್ರಂಥಗಳ ಮೂಲಕ ಪ್ರಪಂಚಕ್ಕೆ ತಿಳಿಸಿಕೊಟ್ಟಿದ್ದಾರೆ. ಆದರೆ ಸಾಮಾನ್ಯ ಜನರಿಂದ ಅವುಗಳ ತಾತ್ಪರ್ಯವನ್ನು ತಿಳಿದುಕೊಳ್ಳುವುದು ಮತ್ತು ಮೇಲ್ನೋಟಕ್ಕೆ ಕಂಡುಬರುವ ವಿರೋಧಗಳನ್ನು ಪರಿಹರಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಪ್ರಾಜ್ಞರ ಮಾರ್ಗದರ್ಶನ ಹಾಗೂ ಅನೇಕ ಗ್ರಂಥಗಳ ಸೂಕ್ಷ್ಮ ಪರಿಶೀಲನೆಯಿಂದ ಮಾತ್ರವೇ ಆಯಾ ವಿಷಯಗಳನ್ನು ಸ್ಪಷ್ಟವಾಗಿ ಅರ್ಥೈಸಿಕೊಳ್ಳಲು ಸಾಧ್ಯ.

ಹಿರಿಯ ವಿದ್ವಾಂಸರೂ, ವೈದಿಕರೂ, ಧರ್ಮಶಾಸ್ತ್ರದಲ್ಲಿ ವಿಶೇಷ ತಿಳುವಳಿಕೆಯನ್ನು ಹೊಂದಿದವರೂ ಆದ ವೇ||ಮೂ|| ತಿಮ್ಮಣ್ಣ ಭಟ್ಟ, ಬಾಲೀಗದ್ದೆ ಇವರು ಅನೇಕ ಧರ್ಮಶಾಸ್ತ್ರಗ್ರಂಥಗಳ ಅವಲೋಕನದಿಂದ, ಇಲ್ಲಿಯ ದೇಶಾಚಾರಕ್ಕೆ ಅನುಗುಣವಾಗುವಂತೆ 'ಅಶೌಚ ನಿರ್ಣಯ' ಎಂಬ ಈ ಕೃತಿಯನ್ನು ರಚಿಸಿ, ಆಸ್ತಿಕ ಜನತೆಗೆ ಮಹದುಪಕಾರವನ್ನು ಸಲ್ಲಿಸಿದ್ದಾರೆ. ಅಶೌಚ ಆಚರಣೆಯ ವಿಷಯದಲ್ಲಿ ಸಾಮಾನ್ಯವಾಗಿ ತಲೆದೋರುವ ಸಂದೇಹಗಳಿಗೆ ಈ ಕೃತಿಯಲ್ಲಿ ಸ್ಪಷ್ಟವಾದ ಹಾಗೂ ಸರಳವಾದ ಉತ್ತರವು ಸಿಗುವಂತಿದೆ.

ಶ್ರೀಮದ್ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳ
ಆಶೀರ್ವಚನದಿಂದ